# ಹೆಂಡ್ತಿ ಗಂಡನಾದರೆ ?






ಕೆ. ಕಾಂತಪ್ಪ ಶೆಟ್ಟಿ

[illegible]

ದೆಲ್ನುಡಿ, ಗ್ರಂಥಮಾಲೆ-ನುಡಿ ೯

ಪರಾಮರ್ಶೆಗಾಗಿ

# ಹೆಂಡ್ತಿ ಗಂಡನಾದರೆ?

(ಏಕಾಂಕ ಪ್ರಹಸನ)

ಕೆ. ಕಾಂತಪ್ಪ ಶೆಟ್ಟಿ

ಕಿರಿಯರ ಪ್ರಪಂಚ
ಉಡುಪಿ

0-50

# ಹೆಂಡ್ತಿ ಗಂಡನಾದರೆ?

## ೧ನೇ ನೋಟ

[ಅರವಿಂದ ಮನೋಹರರಿಬ್ಬರು ಆಪ್ತ ಮಿತ್ರರು. ಅರವಿಂದ ಕಾರ್ಯಜಾಣ, ವಿಚಾರಶೀಲ, ಶಾಂತಸ್ವಭಾವಿ, ಮಂದಗಾಮಿ. ಮನೋಹರ ಅರವಿಂದನ ಪ್ರತಿವಿರುದ್ಧ ಸ್ವಭಾವಿ. ಎಲ್ಲದರಲ್ಲಿಯೂ ಶೀಘ್ರಗಾಮಿ ಮಾತಿನ ಮಲ್ಲ. ಹಿಂದುಮುಂದುನೋಡದೆ ಒಮ್ಮೆಯೇ ಕಾರ್ಯಪ್ರವಾಹಕ್ಕೆ ಧುಮುಕಿ ಮನಬಂದಂತೆ ನಡೆಯುವವ. ಒಮ್ಮೆ ಮಾಡಿದುದಕ್ಕೇನೇ, ಮನಸ್ಸಿಗೆ ತೋರಿದರೆ ಪ್ರತಿವಿರುದ್ಧ ಮಾಡುವುದಕ್ಕೂ ಹಿಂಜರಿಯದವನ. ಆದರೆ ಅರವಿಂದನಿಗಿಂತ ಎಷ್ಟೋ ಜಾಣ, ಎಷ್ಟೋ ಪ್ರತಿಗಾಮಿಯೆಂಬ ಹೆಗ್ಗಳಿಕೆಯುಳ್ಳವ. ಓಂದು ದಿನ ಅರವಿಂದನು ತನ್ನ ಮನೆಯ ಪೋರ್ಟಿಕೋದಲ್ಲಿ ಕೊಲಂಬಿಯಾ ಪೋರ್ಟೆಬಲ್ ಗ್ರಮಫೋನ್ ಇಟ್ಟು "ನಾನೊಂದು ಮದುವೆಯ ಮಾಡಿಕೊಂಡೇ" ಎಂಬ ಮರಿರಾವಿನ ಪ್ಲೇಟನ್ನಿಟ್ಟು ಮುಗುಳುನಗೆ ಬೀರಿ ಅದಕ್ಕೆ ತಕ್ಕಂತೆ ತಾಳ ಹಾಕುತ್ತಾ ಒಬ್ಬನೇ ಕುಳಿತಿರುವಾಗ ಮನೋಹರನು ಲಗುಬಗೆಯಿಂದ ಪ್ರವೇಶಿಸಿ ಒಮ್ಮೆಯೇ ಗ್ರಮಫೋನಿನ ಮುಳ್ಳನ್ನೆತ್ತಿ ಪ್ಲೇಟನ್ನು ತೆಗೆದು ಮೇಜಿಯ ಮೇಲೊಂದೆಡೆ ಬಿಸಾಡಿ ಬಿಡುವನು. ಅರವಿಂದನು ಜಗ್ಗನೆ ಈಸಿಚೇರಿನಿಂದೆದ್ದು ಮನೋಹರನ ಭುಜ ಹಿಡಿದು ಕುಲುಕಿ]

**ಅರವಿಂದ** – ಏನಾಗಿದೆ ನಿನಗೆ? ದುಡ್ಡು ಕೊಟ್ಟುದು ನಾನದಕ್ಕೆ!

**ಮನೋಹರ** — ಯಾರು ದುಡ್ಡು ಕೊಟ್ಟುದಾದರೂ ಇತರರಿಗೊಂದು "ನ್ಯೂಸೆನ್ಸ್" (ಉಪದ್ರವ) ಆಗಬಾರದಷ್ಟೆ?

**ಅರವಿಂದ** — ಏನು 'ನ್ಯೂಸೆನ್ಸ್'?

**ಮನೋಹರ** — ನವವರನು ಮದುವೆಯಾದ ಮೇಲೆ ಪ್ರಥಮ ಸಲ ತನ್ನ ಗೆಳೆಯರನ್ನು ಕಾಣಬರುವಾಗ ಅವನನ್ನು ಸ್ವಾಗತೀಕರಿಸುವುದು ಈ ಸುಟ್ಟ ಪ್ಲೇಟೆನ್ನಿಟ್ಟೇ?

**ಅರವಿಂದ** — ನವವರನು ತನ್ನ ವೆಲ್ ಎಕಂಪ್ಲಿಷ್ಡ್ ಮತ್ತು ಅಪ್ ಟು ಡೇಡ್ (ಸರ್ವ ಗುಣಸಂಪನ್ನ ಮತ್ತು ಅತ್ಯಾಧುನಿಕ) ವಧುವಿನೊಂದಿಗೆ "ನೋಟೀಸು" ಕೊಟ್ಟು ಬಿತ್ತೈಸುತಿದ್ದರೆ ಅವನ ಸ್ವಾಗತ ಗೀತೆಯೇ ಬೇರೆಯಿತ್ತು!

**ಮನೋಹರ** — ಏನಾ ಸ್ವಾಗತ ಗೀತೆ?

**ಅರವಿಂದ** — ನವದಂಪತಿಗಳು ನೂತನ ಶೃಂಗಾರ, ವಯ್ಯಾರ, ಬೆಡಗು ಬಿನ್ನಾಣದಿಂದ ನಮ್ಮ ಮನೆಯಂಗಣಕ್ಕೆ ಮಂದಗಮನದಿಂದ ಸುಂದರ ಹೆಜ್ಜೆಯಿಡುತ್ತಾ ಪ್ರವೇಶಿಸುವಾಗಲೇ "ಪ್ರಿಯ ಬಾಬಾರೋ! ಪ್ರಿಯೆ ಬಾಬಾರೋ! ಪ್ರಿಯ ಬಾಬಾರೋ! ಪ್ರಿಯೆ ಬಾಬಾರೋ!" ಎಂಬ ಪ್ಲೇಟನ್ನು ಸ್ಪೆಶ್ಯಲಾಗಿ ತಯಾರಿಸಿಯೋ ತರಿಸಿಯೋ ಇಡುತಿದ್ದೆ. ಆಗ ಆ ದಂಪತಿಗಳು ಆನಂದ ತುಂದಿಲರಾಗಿ ಕೇವಲ ಅನುರಾಗಮತ್ತರಾಗಿ ಬಾಹ್ಯ ಜಗತ್ತನ್ನೇ ಮರೆತು, ನಮ್ಮ ಮನೆಯಂಗಣವನ್ನೇ ನರ್ತನರಂಗವಾಗಿ ಮಾಡಿ ಕುಣಿ ಕುಣಿದು ಚುಂಬಿಸಿ ಚುಂಬಿಸಿ, ಚುಂಬಿಸಿ ಕುಣಿದು ತಾವು ಸಾಕ್ಷಾತ್ ಆಂಗ್ಲೇಯ ದಂಪತಿಗಳೆಂಬುದನ್ನು ಲೋಕಕ್ಕೆಲ್ಲಾ ವ್ಯಕ್ತಪಡಿಸುವಂತಾಗುತ್ತಿತ್ತು.

**ಮನೋಹರ** — ಸಾಕೋ ತಮಾಷೆ!

**ಅರವಿಂದ** — ಏನು ತಮಾಷೆ? 'ನಾನು ಮದುವೆಯಾದರೆ ಪ್ರತ್ಯಕ್ಷ ಆಂಗ್ಲೇಯ ದಂಪತಿಗಳಂತೆಯೇ ನಡೆಯುತ್ತೇನೋ ಇಲ್ಲವೋ ನೋಡೆ'ಂದು ಮಾತು ಮಾತಿಗೆ ಎತ್ತಿ ಒತ್ತಿ ಚುಚ್ಚಿ ಕಚ್ಚಿ ನನಗೆ ಹೇಳುತಿದ್ದವನಲ್ಲವೆ ನೀನು? ಈಗೇಕೆ ನವ ವರನು ನವ ವಧುವಿನೊಂದಿಗೆ ಬರಲಿಲ್ಲ? ಗೊತ್ತಾಯಿತಲ್ಲ ಬೆಳೆಯ ಗುಣ ಮೊಳೆಯಲ್ಲೆ!

**ಮನೋಹರ** — ಛೇ! ಛೇ! ಏನು ಮಾತದು ಅರವಿಂದ? ಅವಳೇ ನಿನ್ನಲ್ಲಿಗೆ ಬರಲು ತುಸು ನಾಚಿದಳು. ನವ ವಧುವಲ್ಲವೆ? "ಬೇಡ ಹಾಗಾದರೆ ನಿನ್ನನ್ನೇ ಕರತರುವೆ"ನೆಂದು ಇಲ್ಲಿಗೆ ಬಂದೆ.

**ಅರವಿಂದ** — ಏನು? ತುಸು ನಾಚಿದಳೆ? ಎಸ್. ಎಸ್. ಎಲ್. ಸಿ. ಕಲಿತು ಮಿಸ್ಟ್ರೆಸ್ ಆಗಿ ಅನಂತರ ಮಂಗಳೂರಿಗೆ ಹೋಗಿ ಟ್ರೈನಾಗಿ ಆ ಮೇಲೆ ಇಲ್ಲಿಯೇ ಮಿಸ್ಟ್ರೆಸ್ ಆಗಿ ಬಹಳ ಫೋರ್ವರ್ಡೆಂದು (ಮುಂದುವರಿದವಳೆಂದು) ಪ್ರಸಿದ್ಧಿ ಪಡೆದು ಫೋರ್ವರ್ಡ್‌ನೆಸ್ಸಿನ ಇನ್ಕಾರ್ನೇಶನೇ (ಅವತಾರವೇ) ಆಗಿರುವ ನಿನ್ನನ್ನು ಮದುವೆಯಾದ ಮೇಲೆಯೂ ಅವಳು ತುಸು ನಾಚಿದಳೇ ಇಲ್ಲಿಗೆ ಬರಲು ನಿನ್ನೊಂದಿಗೆ? ಅಥವಾ ನಿನಗೇ ಅವಳನ್ನು ಕರಕೊಂಡುಬರಲು ತುಸು ನಾಚಿಕೆಯಾಯಿತೆ? ಯಾವುದು ಹೇಳು

ಯುಲ್ಲಿ ಎಲ್ಲಿಯಾದರೂ ಒಬ್ಬೊಬ್ಬ ದಂಪತಿಗಳು ಒಟ್ಟೊಟ
ಸರಸ ಸಲ್ಲಾಪ ಮಾಡಿಕೊಂಡು ಹೋಗುವಾಗ “ನೋಡು ನೋಡು!
ಂಪತಿಗಳೆಂದರೆ ಹೀಗಿರಬೇಕು” ಎಂದು ಅರ್ಧ ಫರ್ಲಾಂ
ವರೆಗೂ ಅವರನ್ನೇ ಕಣ್ಣಿಣ್ಣು ನೋಡುತ್ತಾ; ಮನಸ್ಸಿ
ಗೆ ಏನೋನೋ ಆಗುತ್ತಿದೆ ಎನ್ನುತಿದ್ದೆಯುಲ್ಲಾ ಈಗ ಆ ಎನೇನೆಲ್ಲಾ
ವುದು ಎಲ್ಲಿ ಹೋಯಿತು? ಮಾತಿಗೂ ಆಚರಣೆಗೂ ಎಷ್ಟೊಂದು
ಂತರವಿದೆ ನೋಡು ಮನೋಹರ?

**ಮನೋಹರ**—ಸಾಕು ಸಾಕು ತಮಾಷೆ ಎಲ್ಲಾ! ನೋಡುವ ಇನ್ನೇ
ರೊಂದು ಪ್ಲೇಟ್ ಇಡು.

**ಅರವಿಂದ**—(‘ನಾನೊಂದು ಮದುವೆ ಮಾಡಿಕೊಂಡೆ’ ಎಂಬುದನ್ನೇ ಪುನಃ
) ಇದನ್ನಾಗ ಅರ್ಧದಲ್ಲೇ ಕುತ್ತಿಗೆ ಮುರಿದೆ. ನನಗೇಕೋ ಇದನ್ನು
ದಷ್ಟು ಸಂತೋಷ!

**ಮನೋಹರ**—ಹೌದು, ಕೇಳಿದಷ್ಟು ಸಂತೋಷ! ಅಂತಹ ಪ್ಲೇಟುಗ
ಕೇಳುವಾಗ, ‘ಫಿಲ್ಮ್ ಸೆನ್ಸರ್ ಶಿಪ್ಪಿ’ನಂತೆ (ಚಲಚಿತ್ರ ಪರೀಕ್ಷಕ
) ಗ್ರಮಫೋನ್ ಪ್ಲೇಟುಗಳ ಕುರಿತೂ ಸೆನ್ಸರ್ ಶಿಪ್ ಅವಶ್ಯವೆಂದು
ರುತ್ತದೆ ನನಗೆ ನನಗೆ ಪೂರ್ಣಯ್ಯನಂತೆ ಒಂದೇ ಒಂದು ಕ್ಷಣದ ಅಧಿ
ದೊರೆಯುತ್ತಿದ್ದರೆ ಮೊದಲು ಈ ಮರಿರಾವ್ ಪ್ಲೇಟುಗಳನ್ನೆಲ್ಲಾ
ಪುಡಿ ಮಾಡಿಸಿ ಅರಬಿ ಸಮುದ್ರದ ಮಧ್ಯೆ ಬಿಸಾಡಿಸಿ ಮರಿರಾವನ್ನು
ಲೇ ಅಂಡಮಾನಿಗೆ ಗಡಿಪಾರು ಮಾಡುತ್ತಿದ್ದೆ!

**ಅರವಿಂದ**—ಬೇಡ ಬೇಡಪ್ಪ! ಆ ಮರಿರಾವ್ ಪಾಪ ಬದುಕಿಕೊಳ್ಳಲಿ.
ಲ್ಲಿಯಾದರೂ ಅವನ ಪ್ಲೇಟ್ ಇಡುವುದು; ನವದಾಂಪತ್ಯದ ಅನು
ದ ನೀನೆಲ್ಲಿಯಾದರೂ ಒಮ್ಮೆಯೇ ಅದನ್ನು ಒಡೆದುಹಾಕಿ ಬಿಡುವುದು!
ಲ್ಲ ‘ಗಸಿ’ ನನಗೆ ಮೂರು ರೂಪಾಯಿಗೆ! ಆ ವ್ಯಾಪಾರವೇ ಬೇಡ.
ಂದು ಪ್ಲೇಟ್ ಇಡುವ. (ರಾಜಯ್ಯಂಗಾರರ ‘ಮನುಜ ಶರೀರವಿದೇನು
ಎಂಬ ಪ್ಲೇಟನ್ನಿಡುವನು.)

**ಮನೋಹರ**—(ಮತ್ತಷ್ಟು ರೇಗಿ) ನಿಲ್ಲಿಸು, ನಿಲ್ಲಿಸು ಕೂಡ್ಲೆ ನಿಲ್ಲಿಸು!

**ಅರವಿಂದ**—ಏನು? ಯಾಕೆ? ಎಲ್ಲಿ? (ದಿಗಿಲು ನಟಿಸುವನು)

**ಮನೋಹರ**—ತೆಗೆ, ತೆಗೆ ಮೊದಲು ಆ ಪ್ಲೇಟನ್ನು: ಅನಂತರ ಹೇಳ್ತೀನೆ, ಸಂಗತಿಯೇನು, ಯಾಕೆ, ಎಲ್ಲಿಯೆಂದು?

**ಅರವಿಂದ**—ಆಯ್ತು ಮಹಾರಾಯ ಈ ನವವರನ ಮರ್ಜಿಯು ನಮ್ಮಂತಹ ಹಳೆ ಮರ್ಜಿಯವರಿಗೆ ಉಳಿಗಾಲವಿಲ್ಲ! ಎಲ್ಲಿಯಾದರೂ ಶಿನು ಮುರಿಯಬೇಡ ಮಹರಾಯ! (ಪ್ಲೇಟನ್ನು ತೆಗೆಯುವನು)

**ಮನೋಹರ**—ಮನುಜ ಶರೀರದಲ್ಲಿ ಸುಖವಿರದಿದ್ದರೆ, ಅದು ನಿರಥ ಕವಾದರೆ ಅದನ್ನ್ಯಾಕೆ ಉಂಟು ಮಾಡಿದನಪ್ಪ ಆ ತಲೆಯಿಲ್ಲದ ದೇವರು ಅವನಿಗೇನು? ಬೇರೆ ಕಸುಬು ಇದ್ದಿಲ್ವೋ ಮನುಜ ಶರೀರದಲ್ಲಿ ಸುಖ ಇಲ್ಲದಿದ್ದರೆ ನಮಗೆಲ್ಲಾ ಒಮ್ಮೆಯೇ ಅರಬೀಸಮುದ್ರದಾಳಕ್ಕೆ ಬಿದ್ದು ಸತ ಈಜೀವದಾಚೆಯಾದರೂ ಸುಖವಿರುವುದೋ ಎಂದು ಶೊ ಧಿಸಹೋದರೇನ

**ಅರವಿಂದ**—ನಾನೂ ಒಂದು ಮದುವೆಮಾಡಿಕೊಂಡಿದ್ದೇನೆ, ಆದರೆ ನ ಗೇನೂ ಹೀಗಾಗಲಿಲ್ಲವಪ್ಪ! ಒಂದೊಮ್ಮೆ ಧಾರೆ ಮಣೆಯಲ್ಲಿ ಹೆಣ್ಣಿನ ಹಿಡಿಯುವಾಗ ಅಪರೂಪವಾಗಿ ಓರೆಕಣ್ಣ ನೋಟಗಳೊಮ್ಮೊಮ್ಮೆ ಒ ಗೂಡುವಾಗ ಏನೋ ಒಂದು ಬಗೆ ಆಗುತ್ತಿತ್ತು. ಆದರೆ ಅದೆಲ್ಲ ಒಂದೇ ದಿವಸ ಆ ಮೇಲೆ ನಾನೇ ನಾನು. ಅವಳೇ ಅವಳು.

**ಮನೋಹರ**—ಹೌದು ನಿಂದೊಂದು ಮದುವೆ! ಗೊಂಬೆ ಮದು

**ಅರವಿಂದ**—ಹೌದಪ್ಪ ನಮ್ಮದೆಲ್ಲ ಗೊಂಬೆ ಮದುವೆ! ಲೋಕದಲ್ಲಿ ಜವಾದ ಮದುವೆಯೆಂದರೆ ನಿನ್ನದೊಬ್ಬನದೇ!

**ಮನೋಹರ**—ಅಫ್‌ಕೋರ್ಸ್! (ನಿಶ್ಚಯವಾಗಿಯೂ) ಮದುವೆಯೆ ದರೆ ಕಂಪೇನಿಯನ್‌ಶಿಫ್ ಆಫ್ ಸೋಲ್, ಮೈಂಡ್, ಎಂಡ್ ಬೋ (ಆತ್ಮ ಮನ ಮತ್ತು ಶರೀರ ಸಹಚರ್ಯೆ) ನಾವು ಇರುವುದೊಟ್ಟಿಗೆ ಹ ಗುವುದೊಟ್ಟಿಗೆ ಬರುವುದೊಟ್ಟಿಗೆ ಸ್ಪೆನಿಶ್ ಸಿವಿಲ್‌ವಾರ್ (ಸ್ಪೈನಿನ ಅ ಕಲಹ) ಯುರೋಪಿಯನ್ ಸಿಚುವೇಶನ್ (ಯುರೋಪಿನ ಪರಿಸ್ಥಿ ಇಂಟರಿಮ್ ಮಿನಿಸ್ಟ್ರಿ (ತಾತ್ಕಾಲಿಕ ಮಂತ್ರಿ ಮಂಡಲ) ಎಟಿಟ್ಯೂಡ್ ಫ್ ದಿ ಗವರ್ನಮೆಂಟ್ ಟವರ್ಡ್ಸ್ ಕಾಂಗ್ರೆಸ್ (ಕಾಂಗ್ರೆಸ್ಸಿನ ಕು

ರಕಾರದ ಧೋರಣೆ) ಗಾಂಧಿಜೀಸ್ ಸ್ಟೇಟ್ಸ್‌ಮೆನ್ಶಿಪ್ (ಗಾಂಧಿಜಿಯವರ ಾಜನೀತಿಜ್ಞತೆ) ಮೊದಲಾದ ವಿಷಯಗಳನ್ನು ನಾವು ಚರ್ಚಿಸದ ದಿನ ಲ್ಲ. ನಿಮ್ಮ ಹೆಂಡಿರೆಂದರೆ ಪಂಜರದ ಪಕ್ಷಿಗಳು. ಬೆಂಕಿ ಬೀಳಲಿ ನಿಮ್ಮ ಜಃಕೇಶನಿಗೆ! [ವಿದ್ಯೆಗೆ]

ಅರವಿಂದ- ನೀನು ಅದೃಷ್ಟಶಾಲಿಯಪ್ಪ! ಅದೃಷ್ಟಶಾಲಿ!

ಮನೋಹರ-ಸರ್ಟನ್ಲಿ! (ನಿಜವಾಗಿಯೂ) (ವಾಚ್ ನೋಡಿ) ಓಹೋ ಹಳ ಹೊತ್ತಾಗಿ ಹೋಯಿತು. ಈಗ ನಾವು ಹೋಗುವ! ಅವಳಲ್ಲಿ ಎಷ್ಟು ಾದುಕೊಂಡಿರುವಳೋ ಏನೋ

ಅರವಿಂದ-ಯಾರು?

ಮನೋಹರ-ಅವಳು

ಅರವಿಂದ-ಅವಳೆಂದರಾರಪ್ಪ? ಹೆಸರಿಲ್ಲವೇ ಅವಳಿಗೆ?

ಮನೋಹರ-ಅವಳೆಂದರೆ ಅವಳೇ, ನನ್ನವಳು.

ಅರವಿಂದ-ಓಹೋ! ನೀನೂ "ಫ್ರೋರ್ವರ್ಡ್" ಅಂದರೆ ಇಷ್ಟೇ. ಹೆಂಡ್ತಿ ಸರು ಹೇಳಲಾರದ ನಿನ್ನ ಫ್ರೋರ್ವರ್ಡ್‌ನೆಸ್ ಎಂತಹದಪ್ಪಾ ಅದು?

ಮನೋಹರ-ಸಾಕೋ ತಮಾಷೆ! ಹೋಗುವ ಡ್ರೆಸ್ ಮಾಡು.

ಅರವಿಂದ-ಹೇಳಪ್ಪ, ಶ್ರೀಮತಿ ಮನೋರಮಾ ಬಾಯಿ ಎಮ್ ರಾವ್ ಂದು. ಆಹಹ! ಮನೋಹರನಿಗೆ ಮನೋರಮೆ! ಮನೋರಮೆಗೆ ುನೋಹರ! ಹೆಸರಿಗೇನೇ ಕೊಡಬೇಕೇನು?

ಮನೋಹರ-ಎಷ್ಟೋ ತಮಾಷೆ ಮಾಡುವುದು! ನಡೆ ಹೋಗುವ.

ಅರವಿಂದ-ಓಹೋ! ಅ-ವ-ಳು ಕಾಯುತ್ತಿರಬಹುದಲ್ಲವೆ? ನಡೆ ನಡೆ ೋಗುವ. (ಇಬ್ಬರೂ ಹೋಗುವರು)

## ೨ನೇ ನೋಟ

[ಕಡುಬೇಸಗೆಯ ಅದೊಂದು ಆದಿತ್ಯವಾರ ಸಂಜೆ ಮನೋಹರನು ತನ್ನ ಮನೆಯ ುಂಭಾಗದ ಹೂದೋಟದ ನಡುವಿನ ಚಿಕ್ಕ ಅಂಗಳದಲ್ಲಿ ಕುರ್ಚಿಯಲ್ಲಿ ಕುಳಿತು ಚಿಂತಾ ುಗ್ನನಾಗಿರುವನು, ಆಗ ಮನೋರಮೆಯು ಲವಂಚದ ಅಂದವಾದ ಬೀಸಣಿಗೆಯೊಂ ದಲ್ಲಿ ಗಾಳಿ ಹಾಕಿಕೊಳ್ಳುತ್ತಾ ಪ್ರವೇಶಿಸಿ]

ಮನೋರಮೆ-ರಂಗ! ರಂಗ! ರಂಗ! (ಗಟ್ಟಿಯಾಗಿ ಕೂಗಿ ಕೋಪದಿ
ಬೀಸಣಿಗೆಯಿಂದ ಗಾಳಿ ಹಾಕಿಕೊಳ್ಳುತ್ತಾ ಅಂಗಳದಲ್ಲಿ ಅತ್ತಿತ್ತ ತಿರುಗಾಡುವಳು)

ರಂಗ-(ಸ್ವಲ್ಪ ಹೊತ್ತಿನ ಮೇಲೆ ಹೊರಗೆ ಓಡಿಬಂದು) ಅವ್ವಾ! ಕರೆದಿರಿ
ನನ್ನನ್ನು?

ಮನೋರಮೆ-ಎಲ್ಲಿ ಹೋಗಿದ್ದಿಯೋ ಮಂಗ! ಇಲ್ಲಿ ಬಾ! ಬಾ ಇ

ರಂಗ-ಬೇಡವ್ವ ಬೇಡ! ನನ್ನ ಕಿವಿ ಮಾತ್ರ ಹಿಂಡಬೇಡಿ. ಮತ್ತೆ
ಬೇಕಾದರೂ ಮಾಡಿ. ನಾನು ಹೊರಗೆ ಉಚ್ಚೆ ಹೊಯಿಲಿಕ್ಕೆ ಹೋ
ನವ್ವ! ನಿಮ್ಮ ಸ್ವರ ಕೇಳಿತು. ಕೂಡ್ಲೆ ಓಡಿ ಬಂದೆ.

ಮನೋರಮೆ-ಹೌದೌದು ಓಡಿ ಬಂದೆ! ನಿನಗೆ ರಾಯರ ಸ
ಹೆಚ್ಚಾಗಿದೆ! ಅಧಿಕ ಪ್ರಸಂಗಿ! ಹೋಗೀಗ; ಒಂದು ಕುರ್ಚಿ ತಾ ಹೋ
(ಮನೋಹರನನ್ನು ದಿಟ್ಟಿಸಿ) ಏನಿದು ಬಹಳ ವಿಚಾರಮಗ್ನರಾಗಿರುವುದಿಂ

ಮನೋಹರ-ಏನಿಲ್ಲ, ಈ ರಾಣಿತನ ಎಷ್ಟರವರೆಗೆ ನಡೆದೀತು ಅ
ಅಷ್ಟೆ.

ಮನೋರಮೆ-(ರಂಗನು ತಂದಿಟ್ಟ ಕುರ್ಚಿಯಲ್ಲಿ ದಡಕ್ಕನೆ ಕೂತು) ನಿ
ರಾಜತನವಿರುವವರೆಗೆ! ಅಲ್ಲ, ನನ್ನದೆಂತಹ ರಾಣಿತನವಪ್ಪ!

ಮನೋಹರ-ಇದೇನು ಸೆಕೆ ನಿನಗೊಬ್ಬಳಿಗೇನೇ ಆಗುವದೋ?
ಗೆಲ್ಲ ಆಗುವದಿಲ್ಲವೋ ನಾವೆಲ್ಲ ನಿನ್ನಂತೆಯೇ ಯಾವಾಗಲೂ ಬೀ
ಹಿಡಿದು ಮೆರೆದಾಡುತ್ತೇವೋ?

ಮನೋರಮೆ-ಅಬ್ಬಬ್ಬ! ನಾನು ಬೀಸಣಿಗೆ ಹಿಡಿಯುವುದೇ
ಯಿತೇ! ಹುಂ, ಆಗಲಿ, ಇನ್ನೇನು ಹೇಳಿ? ನನಗೆ ಸೆಕೆ ಜಾಸ್ತಿ; ನಾ
ಮಾಡುವುದದಕ್ಕೆ? ನಿಮ್ಮನ್ನೆಲ್ಲಾ ಬೀಸಣಿಗೆ ಹಿಡಕೊಳ್ಳಬಾರದೆಂದು ಹ
ವರಾರು!

ಮನೋಹರ-ನಾವಿಬ್ಬರೂ ಹೀಗೆ ಕುರ್ಚಿಯಲ್ಲಿ ರಾಜ ರಾಣಿಯ
ಕುಳಿತಿರುವುದನ್ನು ಯಾರಾದರೂ ನೋಡಿದರೆ ಏನು ಹೇಳಿಯಾರು?

ಮನೋರಮೆ-ಹೇಳುವುದೇನು? ಸಂಜೆ ಗಂಡ ಹೆಂಡಿರಿಬ್ಬರೂ
ಕೂತು ಗಾಳಿ ತೆಗೆದುಕೊಳ್ಳುತ್ತಿದ್ದಾರೆಂದು ಹೇಳಿಯಾರು; ಅಷ್ಟೆ!

ನೋಹರ-ಇಷ್ಟೆ! ನಿನಗೆ ಇಷ್ಟೇ ಗೊತ್ತು! ಇದಂತಿರಲಿ. ನೀನು
ನ್ನೆ ನಡು ರಸ್ತೆಯಲ್ಲಿ ಅರ್ಧ ಘಂಟೆ ನಿಂತು ಅರವಿಂದನೊಡನೆ ಮಾತಾ
ದ್ದುದೇನನ್ನು?

ನೋರಮೆ–ನನಗೆ ಬೇಕಾದ ಸಂಗತಿಯನ್ನು ಅದರಿಂದೇನಾಯಿತು!

ನೋಹರ–ಅದರಿಂದೇನಾಯಿತೇ? ಹೆಣ್ಣು ಹೆಂಗಸು ನೀನು ರಸ್ತೆ
ನಿಂತು ಹಾಗೆಲ್ಲಾ ಗಂಡಸರೊಡನೆ ಮಾತಾಡುವುದು ಸರಿಯೇ?

ನೋರಮೆ-ಓಹೋ ಹಾಗೆ! ಗಂಡು ಗಂಡಸು ನೀವು ಏನು ಬೇಕಾ
ಮಾಡಬಹುದು! ಆದರೆ ಹೆಣ್ಣು ಹೆಂಗುಸಾದ ನಾನು ಅದು ಮಾಡ
ದು, ಇದು ಮಾಡಬಾರದು; ಅಲ್ಲಿ ಹೋಗಬಾರದು; ಇಲ್ಲಿ ಹೋಗ
ದು; ಹಾಗೆ ಮಾತಾಡಬಾರದು! ಆಗಲಿ, ಇನ್ನೇನಾದರೂ ಉಂಟೋ
ಯಿತೋ ಇಲ್ಲಿಗೆ?

ನೋಹರ – ಬಹುಕಾಲದಿಂದ ನನ್ನೊಂದಿಗಿದ್ದು ಒಳ್ಳೆ ಅಡಿಗೆ
ುತ್ತಿದ್ದ ಹುಡುಗನನ್ನು ಹೊರಹಾಕಿದೆ ಈಗ ಬಂದವನಿಗೆ ಸರಿಯಾಗಿ
ಮಾಡುವುದಕ್ಕೂ ತಿಳಿಯುವುದಿಲ್ಲವಲ್ಲ?

ನೋರಮೆ– (ಸಿಟ್ಟಿನಿಂದ) ನಾನೇನು ಮಾಡಬೇಕು ಅದಕ್ಕೆ?
ನ್ನು ಕಳುಹಿಸಿ ಇನ್ನೊಬ್ಬ ಚೆನ್ನಾಗಿ ಅಡಿಗೆ ತಿಳಿದವನನ್ನು ಕರೆತರು
!

ನೋಹರ–ತರುವುದೆಂದರೆ ಹುಡುಗರೇನು ಮಾರ್ಕೇಟಿನಲ್ಲಿ ಮಾರ
ರೇ?

ನೋರಮೆ–ಮಾರಸಿಗದಿದ್ದರೆ ಮಾಡಿತರುವುದೊಂದು ಹುಡುಗ
!

ನೋಹರ - ಪ್ರಿಯೆ, ಎಷ್ಟಾದರೂ ಹುಡುಗರು ಮಾಡಿದ ಅಡುಗೆ
ೀ. ನೀನೀಗ ನಿನ್ನ ಮಿಸ್ಟ್ರೆಸ್ ಕೆಲಸ ಬಿಟ್ಟು ಈ ಹುಡುಗನಿಗೇನೇ
ಮಾಡಲು ಚೆನ್ನಾಗಿ ಕಲಿಸಿ ಮನೆಯ ಜಾಗ್ರತೆ ನೋಡಿಕೊಂಡಿರ
ೇಕೆ ಅದು...... ಹೊರತು........

ನೋರಮೆ— ಏನು ಅದು ಹೊರತು? ಯಾಕೆ ಸಂದೇಹ ಹೇಳಿ

**ಮನೋಹರ**—ನೀನು ಅಷ್ಟೊಂದು 'ಫೋರ್ವರ್ಡ್' (ಮುಂದುವರಿದವಳು) ಆಗಿರಕೂಡದು ಪ್ರಿಯೆ!

**ಮನೋರಮೆ**—ಏತಕ್ಕಾಗಿ ಹಾಗೆನ್ನುವಿರಿ?

**ಮನೋಹರ**—ನಮ್ಮ ಹೃದಯ ಹೇಗಿದ್ದರೂ ಲೋಕಾಪವಾದವನ್ನು ತಪ್ಪಿಸಿಕೊಳ್ಳಬೇಕಲ್ಲ ಪ್ರಿಯೆ!

**ಮನೋರಮೆ**—ಏನು ಲೋಕಾಪವಾದ?

**ಮನೋಹರ** ನಿನ್ನ ಕುರಿತು ಜನರು ಏನೆಲ್ಲಾ ಹೇಳುತ್ತಿರುವರೆಂದು ನೀನು ಬಲ್ಲೆಯಾ?

**ಮನೋರಮೆ**— ನೀವಾದರೂ ತಿಳಿದ ಬಗೆ ಹೇಗೆ?

**ಮನೋಹರ** ನನ್ನ ಅಕ್ಕ ಮತ್ತು ಭಾವ ಹೇಳಿದರು

**ಮನೋರಮೆ**— ಓಹೋ, ಅಕ್ಕ, ಮತ್ತು ಭಾವ ಹೇಳಿದರೆ ಅಕ್ಕ ಮತ್ತು ಭಾವನ ಮಾತು ಕೇಳಲು ನೀವು ನನ್ನನ್ನು ಮದುವೆಯೂದುದೇ ಸರಿ, ಸರಿ ಏನು ಹೇಳಿದರವರು?

**ಮನೋಹರ**— ನೀನು ನನ್ನನ್ನು ಜನರಿದಿರಲ್ಲೆಲ್ಲಾ ಹೆಸರೆತ್ತಿ ಕರೆದೆಯಂತೆ. ಇಚ್ಛಾನುಸಾರ ತಿರುಗುವಿಯಂತೆ. ಸಿಕ್ಕಿದವರ ಮನೆಗೆ ಹೋಗಿ ಯಾರ್ಯಾರೊಡನೆಲ್ಲಾ ಮಾತಾಡುತ್ತಿರುವೆಯಂತೆ.

**ಮನೋರಮೆ**— ಹ್ಞಾಂ. ಮತ್ತೇನು? ಮತ್ತೇನೆಲ್ಲಾ ಮಾಡುವೆನಂತೆ?

**ಮನೋಹರ**— ಮತ್ತೂ ಒಂದು ಮಾತು ಹೇಳಿದರು ಪ್ರಿಯೆ.

**ಮನೋರಮೆ**— ಏನು ಮಾತು ಹೇಳಿಬಿಡಿ ಯಾಕೆ ಬಾಕಿ ಮಾಡುವುದು!

**ಮನೋಹರ** —ನಾವು ಗಂಡ ಹೆಂಡಿರಲ್ಲವಂತೆ. ಹೆಂಡ್ತಿ ಗಂಡರಂತೆ!

**ಮನೋರಮೆ** —ಅಂದರೆ

**ಮನೋಹರ** —ಅಂದರೆ ನೀನು ಗಂಡ, ನಾನು ಹೆಂಡ್ತಿಯಾಗಿರುವೆವಂತೆ.

**ಮನೋರಮೆ** —ಈ ಅಂತೆ ಕಂತೆಗಳನ್ನೆಲ್ಲಾ ಕೇಳಿ ನೀವು ಸುಮ್ಮನಿದ್ದಿರೇ?

ಮನೋಹರ–ಇಲ್ಲ.

ಮನೋಹರ-ಮತ್ತೇನು ಮಾಡುವುದು?

ಮನೋರಮೆ–ನಿಮಗೆಲ್ಲ ಅದು ಸರಿತೋರುವುದೇ

ಮನೋರಮೆ-ಹಾಗಾದರೆ ಯಾರು ಏನು ಹೇಳಿದರೇನು?

ಮನೋಹರ ಆದರೆ ಲೋಕಾಪವಾದಕ್ಕೆ ಬೆದರಬೇಕಲ್ಲ ಪ್ರಿಯೆ?

ಮನೋರಮೆ –ನಾವು ಯಾವುದನ್ನೂ ಯಾರನ್ನೂ ಗಣಿಸದೆ, ದೊರೆ ಮಡ್ಡಮಗಳಂತಿರಬೇಕೆಂಬ ನಿಮ್ಮ ಮಾತೆಲ್ಲಾಳಿಯಿತು ಈಗ?ಅವರು ಗಂಡ ಹೆಂಡಿರಂತಿರುವುದೇ ಹೆಂಡ್ತಿ ಗಂಡರಂತಿರುವುದೇ?

ಮನೋಹರ-ಏನು ಮಾಡುವುದು ಸಮಾಜದಲ್ಲಿರುವಾಗ ಕಣ್ಣು ಕಟ್ಟಿಗಾದರೂ ಅವರ ಕಟ್ಟು ಕಟ್ಟಲೆಗಳಂತೆ ನಡೆಯಬೇಕಲ್ಲವೆ?

ಮನೋರಮೆ-ಇದನ್ನು ನೀವು ಮೊದಲೇ ಹೇಳುತ್ತಿದ್ದರೆ ನಿಮ್ಮನ್ನು ನಾನು ಮದುವೆಯಾಗುತ್ತಿದ್ದೇ ಇಲ್ಲವಲ್ಲ? ಆಗ ಟ್ರೂ ಕಂಪೆನಿಯನ್ ಶಿಪ್, (ನಿಜವಾದ ಸಹಚರ್ಯೆ) ಸ್ತ್ರೀಯರಿಗೂ ಗಂಡಸರಂತೆ ಇರಬೇಕಾದ "ಲಿಬರ್ಟಿ" ಎಂಡ್ ಇಕ್ವಾಲಿಟಿ (ಸ್ವಾತಂತ್ರ್ಯ ಮತ್ತು ಸಮಾನತೆ) ಈಗ ಇಂಡಿಯನ್ ಸೊಸೈಟಿಯಲ್ಲಿ (ಹಿಂದು ಸಮಾಜದಲ್ಲಿ) ಸ್ತ್ರೀಯರನ್ನು ಸ್ಲೇವ್ಸ್‌ಗಳಾಗಿ (ದಾಸಿಯರಾಗಿ) ಕಾಣುವ ರೀತಿಯು ಕುರಿತೆಲ್ಲಾ ಉದ್ದುದ ಮಾತಾಡುತ್ತಿದ್ದೀರಲ್ಲ.

ಮನೋಹರ-ಏನು ಮಾಡುವುದು! ಮನುಷ್ಯನ ಸ್ಥಿತಿ ಹೀಗೆಯೇ ನಿಲ್ಲುವುದೆನ್ನಲಾಗುವುದೇ?

ಮನೋರಮೆ–ಅದೇನಿಲ್ಲ! ಇವತ್ತು ಮನುಷ್ಯನಾಗಿದ್ದವನು ನಾಳೆ ಮಂಗನಾಗಿ ಹೋಗಬಹುದು. ಯಾಕೆಂದರೆ ಆವನ ಮುತ್ತಾತ ಮಂಗನೇ ಅಲ್ಲವೇ? ಎಂತೆಂತಹ ವಿಚಿತ್ರ ಸಂಗಾತಿಗಳೆಲ್ಲಾ ನಡೆಯುತ್ತಿವೆ ಈ ಲೋಕದಲ್ಲಿ! ನಿಮ್ಮದು ಅದರಲ್ಲೊಂದೆನ್ನುವ, ಚಿಂತೆಯಿಲ್ಲ; ನಾನೇನು ಮಾಡಬೇಕೆನ್ನುವುದೀಗ ನೀವು?

ಮನೋಹರ-ಮತ್ತೇನಿಲ್ಲ; ಮಿಸ್ಟ್ರೆಸ್ ಕೆಲಸ ಬಿಡಬೇಕು. ಮನೆಯಲ್ಲಿಯೇ

ಇದ್ದು ಹುಡುಗನಿಗೆ ಅಡಿಗೆ ಮಾಡ ಕಲಿಸಿ ಮನೆಗೆಲಸ ನೋಡಿಕೊಂಡಿರ ಬೇಕು. 'ಗೃಹಿಣೀ ಗೃಹಮುಚ್ಯತೇ'-

ಮನೋರಮೆ-ಸಾಕು ನಿಮ್ಮ ಶ್ಲೋಕಾಧಾರ! ನಾನು ಹಾಗಿರುವುದ ಕ್ಕೇನೂ ಅಡ್ಡಿಯಿಲ್ಲ. ನನ್ನ ಖರ್ಚಿಗೆ ಮಾತ್ರ ಬೇಕಷ್ಟು ಹಣವನ್ನಾಗಲಿ ನನಗೆ ಬೇಕಾದ ಸಾಮಾನುಗಳನ್ನಾಗಲಿ ನೀವು ತಂದುಕೊಡ ಬೇಕಾದೀತು! "ಮತ್ತೆ ಹಾಗೆ, ಹೀಗೆ,ದುಡ್ಡಿಲ್ಲ; ಪುರುಸೋತಿಲ್ಲ"ಎಂದರೆ ನಾನು ಕೇಳಲಾರೆ! ಈಗಲೇ ಹೇಳಿದ್ದು.

ಮನೋಹರ-ನಿನಗೆ ಏನು ಬೇಕಾದರೂ ತಂದುಕೊಡುತ್ತೇನೆ ಪ್ರಿಯೆ! ಆ ಕುರಿತು ನಿನಗೆ ಯಾವ ಸಂದೇಹವೂ ಬೇಡ. ಹ್ಯಾಗೂ ನಾವಿಬ್ಬರೂ ನಮ್ಮ ದಾಂಪತ್ಯವನ್ನು ಸುಖವಾಗಿ ನಡೆಸಿದರಾಯಿತು.

ಮನೋರಮೆ-ದಾಂಪತ್ಯ ಸುಖವೆಂದರೆ ನಿಮ್ಮೊಬ್ಬರ ಸುಖವಲ್ಲವೇ ಅದಕ್ಕೇನೂ ಅಡ್ಡಿಯಿಲ್ಲ. (ರಿಸ್ಟುವಾಚು ನೋಡಿ) ಘಂಟೆ ಆರಾಯಿತು. ನೀವು ಮಾರ್ಕೆಟಿಗೆ ಹೋಗುವುದಿಲ್ಲವೇ?

ಮನೋಹರ-ಒಹೋ ತಡವಾಯಿತು, ಹೋಗುತ್ತೇನೆ ಪ್ರಿಯೆ! ಕೋಪಿ ಸಿಕೊಳ್ಳಬೇಡ.ಜನಾಪವಾದ ತಪ್ಪಿಸಲೆಂದು ಮಾತ್ರ ನಾನಿಷ್ಟು ಹೇಳಿದುದು. ನಮ್ಮ ಜನರು ಅತ್ಯಂತ ಕ್ಷುದ್ರ ಬುದ್ಧಿಯುವರು.

ಮನೋರಮೆ-ಸಾಕು! ಸಾಕು! ನನಗೇನೂ ನಿಮ್ಮ "ಎಕ್ಸ್‌ಪ್ಲನೇ ಶನ್" (ಸಮಾಧಾನ) ಬೇಕಿಲ್ಲ. ಮಾರ್ಕೆಟಿಗೆ ಹೋಗಿ ಈಗ.

ಮನೋಹರ-ಆಯ್ತು. "ಗುಡ್ ಈವ್ನಿಂಗ್"ಈಗ ಬರುತ್ತೇನೆ ಪ್ರಿಯೆ!

ಮನೋರಮೆ-(ಗುಡ್ ಈವ್ನಿಂಗ್ ಕೊಡದೆ, ಯಾವಾಗ ಬೇಕಾದರೂ ಬನ್ನಿ, ನನಗೇನು? ಬರುವಾಗ ಒಂದು ಬೋಕ್ಸ್ ಕುಟ್ಟಿಕೂರ ಪೌಡರ್, ಗೊಡ್ರೆಜ್ ಸೋಪ್ ನಂಬರ್ ವನ್ ಒಂದು ಬೋಕ್ಸ್, ಮತ್ತು ಒಂದು ಚೆಂಡು ಜಾಜಿ ಹೂ ತಂದು ಬಿಡಿ.

ಮನೋಹರ-ಆಯ್ತು ಪ್ರಿಯೆ, ತಪ್ಪದೆ ತರುತ್ತೇನೆ ಗುಡ್ ಈವ್ನಿಂಗ್.

ಮನೋರಮೆ-ಇನ್ನೊಂದು ಸಂಗತಿ ಮರೆತೆ ಸೆಂಟು ಕರ್ಚಾಗಿ ಹೊ ಗಿದೆ ಒಂದು ಬಾಟ್ಲ ಫಸ್ಟ್‌ಕ್ಲಾಸ್ ಸೆಂಟ್ ತರಬೇಕು.

ಮನೋಹರ-ಅಯ್ತಪ್ಪಾ ಆಯ್ತು. ನಿನಗೆ ಬೇಕಾದ್ದನ್ನೆಲ್ಲಾ ತರು
ೀನೆ. ಗುಡ್ ಈವ್ನಿಂಗ್.

ಮನೋರಮೆ-ನಾನು ಹೇಳಿದ್ದು ನಿಮಗೆಲ್ಲಾ ನೆನಪಾದೀತೆ ಬೇಕಾ
ೆ ಒಂದು ಪಟ್ಟಿ ಮಾಡಿಕೊಡುತ್ತೇನೆ.

ಮನೋಹರ-ಬೇಡ, ಬೇಡ ಪ್ರಿಯೆ ನನಗೆಲ್ಲಾ ನೆನಪುಂಟು. ಗುಡ್
ವ್ನಿಂಗ್.

ಮನೋರಮೆ-ಎಲ್ಲವನ್ನೂ ನೆನಪಿನಿಂದ ತರದಿದ್ದರೆ ನೋಡಿ ಮತ್ತೆ!
ಡ್ ಈವ್ನಿಂಗ್. ಹುಂ ಹೋಗಿ. (ಮುಗುಳ್ನಗೆ ಬೀರುವಳು. ಮನೋಹರನು
ರ್ಷಚಿತ್ತನಾಗಿ ಹೊರಟು ಹೋಗುವನು)

## ೩ನೇ ನೋಟ

(ಮನೋಹರನು ತನ್ನ ಮನೆಯ ಎದುರಿನ ಅಗಲವಾದ ವರಾಂಡದಲ್ಲಿ ಈಸಿಚೇರಿ
ಒರಗಿ ಚಿಂತಾಮಗ್ನನಾಗಿರುವಾಗ ಅರವಿಂದನು ಪ್ರವೇಶಿಸಿ)

ಅರವಿಂದ-ಗುಡ್ ಈವ್ನಿಂಗ್ ಮನೋಹರ, ಹೌ ಗೋಸ್ ದಿ ವರ್ಲ್ಡ್
ತ್ ಯು [ನಮಸ್ಕಾರ, ಮನೋಹರ, ಹ್ಯಾಗಿದ್ದಿ] [ಮನೋಹರನು
ಮ್ಮನಿರುವನು. ಅರವಿಂದನು ಅವನ ಸಮೀಪ ಹೋಗಿ ಭುಜ ಹಿಡಿದು ಕುಲುಕಿ]
ರು! ಏನಾಯಿತು ಮನೋಹರ (ಮನೋಹರನು ಮತ್ತೂ ಸುಮ್ಮನಿರುವನು
ಒಳಗೇನೋ ಕೆಲಸಮಾಡುತ್ತಿದ್ದ ಮನೋರಮೆಯು ಹೊರಗೆ ಬಂದು ಬಾಗಿಲು
ಮುಮ್ಮಗೆ ನಿಲ್ಲುವಳು ಅವಳನ್ನುದ್ದೇಶಿಸಿ) ಗುಡ್ ಈವ್ನಿಂಗ್ ಮನೋರಮಾ!
ನು ನಿನ್ನ ಗಂಡನ ಅವಸ್ಥೆ? ಮನೋರಮೆಯು ಮಾತಾಡಲೆತ್ತಿದ ತುಟಿಗಳನ್ನು
ಹಿಡಿದು ಸುಮ್ಮನಿರುವಳು] ಇದರಲ್ಲಿಯೂ ಕಂಪೇನಿಯನ್ ಶಿಪ್ (ಸಹ
ರ್ಯ) ಇದೆಯೋ? ಗಂಡ ಮಾತಾಡದಿದ್ರೆ ಹೆಂಡ್ತಿಯೂ ಮಾತಾಡಬಾ
?

ಮನೋರಮೆ-ಪರ್ಮಿಶನ್ (ಅಪ್ಪಣೆ) ಬೇಕಲ್ಲ ತುಟಿ ಎತ್ತಲಿಕ್ಕೆ!
ನಿಲ್ಲಿ ಬಂದುದೇ ತಪ್ಪು ನೋಡಿ ಪರ್ಮಿಶನ್ ಇಲ್ಲದೆ! ನಿಮ್ಮ ಸ್ವರ ಕೇಳಿ
ರ್ಷದಿಂದ ಬಂದು ಬಿಟ್ಟೆ.

**ಮನೋಹರ**-ಹಾಗಾದರೆ ಯಾಕೆ ಬಂದದ್ದು? ಯಾಕೆ ಮಾತಾಡ
ವುದು ಪರ್ಮಿಶನ್ ಇಲ್ಲದೆ?

**ಅರವಿಂದ**-ಇದೇನು ಮನೋಹರ? ಪ್ರಾಯಶಃ ಇದು ಅವನ ಒಂದ
ಕ್ಷಣದ ಡಿಕ್ಟೇಟರ್‌ಶಿಪ್ ಎಂದು ತೋರುತ್ತದೆ. ಮನೋರಮಾ ನೀನದಕ
ನೊಂದುಕೊಳ್ಳಬೇಡ. ಮನೋಹರ ಇದೇನು ಸಂಗತಿ?

**ಮನೋಹರ**-ಏನೆಂದು ಅವಳೊಡನೆಯೇ ಕೇಳು.

**ಮನೋರಮೆ**-ಓಹೋ ನನ್ನೊಡನೆಯೇ ಕೇಳಬೇಕೆ? ಹಾಗಾದ
ಪರ್ಮಿಶನ್ ಸಿಕ್ಕಿತೆಂದಾಯಿತು ಮಾತಾಡಲಿಕ್ಕೆ!

**ಅರವಿಂದ**-ಏನು ಏನು, ಸಂಗತಿಯಿಂದು ಮನೋರಮಾ? ಅ
ನಿಗೆ ಡಿಕ್ಟೇಟರ್‌ಶಿಪ್ ತಲೆಗೇರಿ ಬಿಟ್ಟಂತಿದೆ. ನೀನಾದರೂ ಹೇಳಬಾರ
ಮನೋರಮಾ?

**ಮನೋರಮೆ** ಸಂಗತಿ ವಿಶೇಷವೇನಿಲ್ಲ ಮಿಸ್ಟರ್ ಅರವಿಂದ್ 9
ಪರ್ಸೆಂಟ್ [ಸೇಕಡ 99 ಮಂದಿ] ಗಂಡಸರಿಗೆಲ್ಲಾ ಸರ್ವಸಾಮಾನ್ಯವಾ
ಸಂಗತಿಯೇ ಇದು.

**ಅರವಿಂದ**-ಏನದ ಮನೋರಮಾ?

**ಮನೋರಮೆ**—ನೀವೇನಾದರೂ ಎಕ್ಸೆಪ್ಶನ್ (ಅಪವಾದ) ಇರುವಿರ
ಏನೊ ಅದಕ್ಕೆ! ಎಕ್ಸ್‌ಕ್ಯೂಸ್ ಮಿ ಮಿಸ್ಟರ್ ಅರವಿಂದ್ (ದಯಮಾ
ಕ್ಷಮಿಸಿರಿ)

**ಅರವಿಂದ**-ಸಂಗತಿ ಎನೆಂದು ಮನಬಿಚ್ಚಿ ಹೇಳಬಾರದೇ ಮನೊ
ರಮಾ?

**ಮನೋರಮೆ**—ಸಂಗತಿ ಇಷ್ಟೆ. ಹೆಂಡತಿಗೆ ಗಂಡನಂತೆಯೇ ಸ್ವಾತ
ತ್ರ್ಯವಿದೆ, ಸಮಾನತೆಯಿದೆ, ಆವಳು ಗಂಡನ ಲೈಫ್ ಕಂಪೇನಿಯನ್ ಫ್ರೆ
ಡ್ (ಜೀವನ ಸಂಗಾತಿ,ಗೆಳತಿ) ಅಂತ ದೊಡ್ಡ ದೊಡ್ಡ ಲೆಕ್ಚರು ಕೊಡುತ್ತಾ
ರಲ್ಲ ಅದೆಲ್ಲಾ ಟಕ್ಕು, ಕಣ್ಣುಕಟ್ಟು! ಎಡ್ಯುಕೇಟೆಡ್ (ವಿದ್ಯಾವಂತ ಗಂಡ
ದಿರ ಹೆಂಡಿರು ಎಡ್ಯುಕೇಟೆಡ್ ಸ್ಲೇವ್ಸ್, (ವಿದ್ಯಾವಂತ ದಾಸಿಯರು) ಅಷ್ಟೆ

**ಅರವಿಂದ**-ಆದರೆ ನಿನ್ನಗಂಡ, "ಕಂಪೇನಿಯನ್‌ಶಿಫ್ ಆಫ್ ಸೋಲ

ಫ್ರೆಂಡ್ ಎಂಡ್ ಬೋಡಿಯನ್ನು (ಆತ್ಮ ಮನ ಮತ್ತು ಶರೀರ ಸಹಚರ್ಯೆ ಯನ್ನು) ಆಶಿಸುವವ ಪ್ರತ್ಯಕ್ಷ ಆಂಗ್ಲೇಯ ದಂಪತಿಗಳಂತಿದ್ದು ಸಮಾಜ ಕ್ಕೊಂದು ನೂತನ ಮಾದರಿ ಹಾಕಿಕೊಡಬೇಕೆಂದಿದ್ದವ ಇತರರ ಹಾಗೇ ಏನೂ ಮಾಡಲಿಕ್ಕಿಲ್ಲವ.

ಮನೋರಮೆ—ಹೌದೌದು! ನನಗೇನೇ ಆ ಕಂಪೆನಿಯನ್ ಶಿಪ್ (ಸ ಹಚರ್ಯೆ) ಸಾಕುಸಾಕಾಗಿ ಅದಕ್ಕಿಂತ ಅಡಿಗೆ ಮನೆ ಅಜ್ಜಿಯಾಗಿರುವುದೇ ಲೇಸೆಂದಿರುವೆನು.

ಅರವಿಂದ—ಹಾಗಂದ್ರೆ?

ಮನೋರಮೆ —ಹಾಗಂದ್ರೆ ಬಿಚ್ಚಿ ಹೇಳಬೇಕೇ ಮಿಸ್ಟರ್ ಅರವಿಂದ್? ಅವರು ಮೊದಲು ಹೆಂಡ್ತಿ ಗಂಡನಾಗಿದ್ದಂತೆ. ಈಗ ಗಂಡ ಹೆಂಡ್ತಿಯಾ ಗಲು ಪ್ರಯತ್ನಿಸುತ್ತಿದ್ದಾರೆ!

ಅರವಿಂದ—ಅಂದರೆ?

ಮನೋರಮೆ—ಅಂದರೆ ಮೊದಲವರು ಹೆಂಡ್ತಿತನದ ಗಂಡನಾಗಿದ್ದ ರಂತೆ ಈಗ ಗಂಡಸುತನದ ಗಂಡನಾಗುತ್ತಿದ್ದಾರೆ.

ಅರವಿಂದ—ಅಂದರೆ ಅವನು ಈಗೇನು ಮಾಡುತ್ತಿದ್ದಾನೆ ಮನೋ ರಮ

ಮನೋರಮೆ—ಏನೆಂದು ನಿಮಗೆ ಆರಂಭದಲ್ಲೇ ತಿಳಿಯಲಿಲ್ಲವೇ ನಾ ನವರ ಪರ್ಮಿಶನ್ (ಒಪ್ಪಿಣೆ) ವಿನಹ ಏನೂ ಮಾಡಬಾರದೆಂದೇ ಅವರ ಕಟ್ಟಪ್ಪಣೆ

ಅರವಿಂದ—ಛೆ, ಛೆ, ಹಾಗೇನು ಮಾಡಲಿಕ್ಕಿಲ್ಲವ. ಅವನ ಕೆಲ ಸಮ ಯದ ಡಿಕ್ಟೇಟರ್‌ಶಿಪ್ಪಾಗಿರಬೇಕು. ಅವನಂತಹ ಸ್ತ್ರೀ ಸ್ವಾತಂತ್ರ್ಯದ ಸ್ಟ್ರೇಂಚ್ ಎಡ್ವಕೇಟ್ (ಪ್ರಬಲ ಪ್ರತಿವಾದಕನು) ಈಗಿರಲಾರ, ಹಿಂದೆ ಹುಟ್ಟಿರಲಾರ, ಮುಂದೆ ಹುಟ್ಟಲಾರ.

ಮನೋರಮೆ-ಲೋಕದ ಇತರ ಸ್ತ್ರೀಯರ ಸ್ವಾತಂತ್ರ್ಯದ ಎಡ್ವಕೇಟ್ ನನ್ನ ಹೆಂಡ್ತೀದ್ದಲ್ಲ.

ಅರವಿಂದ – ಏನು ಹೇಳುವೆ ಮನೋರಮೆ ನೀನು? ಸ್ತ್ರೀಯು

ಪುರುಷನ ನಿಜವಾದ ಅರ್ಧಾಂಗಿಯಾಗಬೇಕೆಂದೇ ನಿನ್ನನ್ನವನು ಹುಡುಕಿ ಹುಡುಕಿ ಸ್ವಯಂವರವಾದುದು!

**ಮನೋಹರ** — ಹಾಗಾದರೆ ಕೇಳಿ ಸರಿಯಾಗಿ ಈ ಅರ್ಧಾಂಗಿತನವನ್ನು! ನಾನೆಲ್ಲಿಯಾದರೂ ಹೊರಗೆ ಹೋಗ್ಲಿಕ್ಕಿಲ್ಲ. ಯಾರೊಡನಾದ್ರೂ ಮಾತಾಡಲಿಕ್ಕಿಲ್ಲ. ಸಂಜೆ ಮಹಿಳಾ ಸಭೆಗೂ ಹೋಗಬಾರದಂತೆ. ತಿಂಗಳಾರಾಯಿತು ಅದರ ಸಬ್‌ಸ್ಕ್ರಿಪ್ಶನ್ (ಚಂದಾ) ಕೊಡದೆ. ನಿಮ್ಮೊಡನೆ ನಾನು ಅಂದು ರಸ್ತೆಯಲ್ಲಿ ನಿಂತು ಮಾತಾಡಿದುದೂ ತಪ್ಪಂತೆ ಹೆಚ್ಚೇಕೆ ಆಫೀಸಿಗೆ ಹೋಗುವಾಗ ನನ್ನನ್ನು ಕೋಣೆಯೊಳಗೆ ಹಾಕಿ ಬೀಗ ಹಾಕಿಹೋಗುವ ಮಾತೂ ಬಂದಿದೆ. ಪುಣ್ಯದಿಂದ ಕಾರ್ಯರೂಪಕ್ಕೆ ಬರಲಿಲ್ಲದು ಇಷ್ಟರವರೆಗೆ.

**ಅರವಿಂದ** — ದಿಸ್ ಈಸ್ ಹೊರಿಬ್ಲ್ (ಇದು ಭಯಂಕರ ಸಂಗತಿ)

**ಮನೋರಮಾ** — ಇಷ್ಟೇ ಅಲ್ಲ, ಇನ್ನೂ ಉಂಟು ಕೇಳಿ ಪುರಾಣ! ಅವರು ಕ್ಲಬ್ಬಿನಿಂದ್ಲೋ ಸಿನೆಮಾದಿಂದ್ಲೋ ರಾತ್ರಿ 10-11 ಘಂಟೆಗೆ ಬರುವ ತನಕ ನಾನು ಊಟಮಾಡದೆ ಯೊವಾಗ ಚಿತ್ತೈಸುತ್ತದೆ ಸವಾರಿಯೆಂದು ಕಣ್ಣಿಗೆ ಎಣ್ಣೆ ಹಾಕಿ ಕೊಂಡು ಎಚ್ಚರದಿಂದ ನಿರೀಕ್ಷಿಸಿಕೊಂಡಿರಬೇಕಂತೆ. ಬೆಳಿಗ್ಗೆ 8-9 ಘಂಟೆಯುವರೆಗೂ ಸವಾರಿ ಏಳದಿದ್ದರೆ ನಾನು ಏಳುವಾಗಲೆ, "ರಂಗ ನಾಯಕ ರಾಜೀವಲೋಚನ ರಮಣ ನೀ ಬೆಳಗಾಯಿತೇಳೆ"ನ್ನುತ ಎಂದು ಗಟ್ಟಿಯಾಗಿ ಉದಯರಾಗ ಹಾಡಿ ಅವರನ್ನೆಬ್ಬಿಸಬೇಕಂತೆ!

**ಅರವಿಂದ** - ಇದು ಹಳೆಯ ಮರ್ಜಿಗಿಂತ್ಲೂ ಕಡೆಯಾಯಿತು.

**ಮನೋರಮಾ** - ಕೇಳಿ ಕೇಳಿ ತಾಳ್ಮೆಯಿಂದ; ಇಷ್ಟೇ ಅಲ್ಲ, ಇನ್ನೂ ಉಂಟು. ಕಾಫಿ ತಿಂಡಿಯ ವಿಷಯ ಕ್ರಿಟಿಸೈಸ್ (ಟೀಕೆ) ಮಾಡದ ದಿನವಿಲ್ಲ. ಊಟದ ಕುರಿತು ಕಂಪ್ಲೈಂಟ್ (ದೂರು) ಪ್ರತಿ ದಿನ ಇದ್ದದ್ದೇ. ವಸ್ತ್ರ ಒಗೆದು ಇಸ್ತ್ರಿ ಹಾಕಿ ಮಡಿ ಮಾಡಿದ್ದು ಸ್ವಲ್ಪ ಹೆಚ್ಚು ಕಡಿಮೆಯಾದರೆ ಬಂತು ಕೋಪ! ನಾನೇನಾದರೂ ತಂದು ಕೊಡ ಹೇಳಿದರೆ, "ಹಣ ಎಲ್ಲಿಂದ, ನಿನ್ನಪ್ಪನ ಮನೆಯಿಂದ ಬರುತ್ತದೋ" ಎಂದಾಯಿತು. ಬಾಯ್ಬಿಟ್ಟು ಮಾತಾಡಿದರೆ ಎದುರಾಡುವುದೆಂದಾಯಿತು. ಮನೆಯಿಂದ ಹೊರಡಬೇಕೆಂದಾಯಿತು. "ಯಾಕೆ ಬೇಕಪ್ಪ ನನಗೆ ಎಡ್ಯುಕೇಟೆಡ್ ವೈಫೂ ವೈಟ್ ಎಲಿ

ಫೆಂಟೂ! (ವಿವಾವಾತ ಹೊಡತಿ ವುನೆವಾಗಿ) ಎಲ್ಲಿಯೂದ ಊ ಸಿಪ್ಸ್ಲ್ ವಿಲೆಜ್ ಗರ್ಲನ್ನು ವೆುರಿಯೆ ಜ್ ಆಗಿದೆ (ಸರಳ ಹಳ್ಳಿ ಹುಡುಗಿಯನ್ನು ವುದುವೆಮಾಡಿಕೊಂಡಿದ್ರೆ) ಸುಖನಾಗಿರಬಹುದಿತ್ತಲ್ಲ!" ಎಂಬುವೇ ಅನುನಿತ್ಯದ ಪಲ್ಲವಿ. ಗಂಡಸರು ಸಂಪಾದಿಸಿ ತಂದು ಹಾಕುವವರು! ಹೆಂಡಿರ ಮೇಲೆ ಅಧಿಕಾರ ನಡಿಸುವುದ. ಅವರ ಜನ್ಮ ಸಿದ್ಧ ಹಕ್ಕು! ಎಲ್ಲವನ್ನೂ ಸಹಿಸಿ ಪೆಟ್ಟು ಕೊಟ್ಟರೂ ತಿಂದು ಅನುನಿತ್ಯ ಅನನ್ಯ ಭಕ್ತಿಯಿಂದ ಪತಿದೇವನ ಪೂಜೆ ನಡೆಸುವುದೇ ಪತ್ನಿಯ ಪವಿತ್ರಧರ್ಮ!

ಅರವಿಂದ. ಛಿ. ಪೆಟ್ಟು ಕೂಡಾ ಕೊಟ್ಟಿರುವನೆ ಮನೋರಮ ನಿನಗಾತ

ಮನೋರಮೆ - ಒಂದೆರಡು ಸಲವಲ್ಲ

ಅರವಿಂದ – [ಕ್ರುದ್ಧನಾಗಿ] ಏನು ಮೂರ್ಖತನ ನಿನ್ನದಿದು ಮನೋಹರ [ಮನೋಹರ ಮೌನನಾಗಿರುವನು]

ಮನೋರಮೆ ಘಂಟೆ ಮೂರಾಯಿತು ಹೀಗೆ ಕೂತು ತಪಸ್ಸು ಮಾಡ್ಲಿಕ್ಕೆ ತೊಡಗಿ ಏನೋ ನೂತನ ಸಿದ್ಧಿಯಿರಬೇಕು ಇಂದು.

ಅರವಿಂದ - (ಮನೋಹರನನ್ನು ರಟ್ಟೆ ಹಿಡಿದೆಬ್ಬಿಸಿ) ಏನು? ಏನಿದು ಮನೋಹರ ಏನಾಗಿದೆ ನಿನಗೆ?

ಮನೋಹ - ಆಗಿರುವದೇನು ನನ್ನ ಅದೃಷ್ಟ ಅರವಿಂದ? ನನ್ನಲಿಪಿಃ

ಅರವಿಂದ. ಏನು ನಿನ್ನ ಅದೃಷ್ಟ ನಿನ್ನ ಲಿಪಿ ಐ ಎಮ್ ದಿ ಕೆಪ್ಟನ್ ಆಫ್ ಮೈಸೋಲ್. ಐ ಎಮ್ ದಿ ಮಾಸ್ಟರ್ ಅಫ್ ಮೈ ಫೇಟ್ (ನಾನು ನನ್ನ ಆತ್ಮನಾವೆಯ ಕರ್ಣಧಾರ. ನನ್ನ ಅದೃಷ್ಟದ ನಾಯಕ, ಎನ್ನುತ್ತಿದ್ದೆಯಲ್ಲ

ಮನೋಹರ – ನೀನು ಎಷ್ಟು ಬೇಕಾದರೂ ತಮಾಷೆ ಮಾಡು ಅರವಿಂದ! ನನ್ನ ಅದೃಷ್ಟ ಏನು ಮಾಡುವುದು!

ಅರವಿಂದ – ಏನೋ ನಿನ್ನ ಅದೃಷ್ಟ? ಏನಾಯಿತು ಹೇಳಬಾರದೇ?

ಮನೋಹರ — ನನ್ನ ಕೆಲಸ ಹೋಯಿತು ಅರವಿಂದ(ನಿಟ್ಟುಸಿರಿಡುವನು)

ಮನೋರಮೆ– ಓಹೋ ಕೆಲಸಹೋಯಿತೇ? ಅದು ನನಗೆ ಗೊತ್ತು! ದಿನ ಇಡೀ ಕ್ಲಬ್ಬಿನಲ್ಲಿ ಬ್ರಿಜ್ಜೂ, ಪೋಕರೇ (ಇಸ್ಪೀಟು) ಆಡುತ್ತಿದ್ದರೆ ಕೆಲಸ ಉಳಿಯುವುದೆಂದರೆ ಹ್ಯಾಗೆ?

(ಅಡಿಗೆ ಹುಡುಗ ಪ್ರವೇಶಿಸಿ)

**ಹುಡುಗ** - ಅಮ್ಮಾ! ಅನ್ನದ ಪಾತ್ರೆಯಿಂದ ನೀರು ಉಕ್ಕಿ ಒಲಿಗೆ ಬಿದ್ದು ಬೆಂಕಿ ನೊಂದಿ ಹೋಯಿತು. ಅನ್ನ ಬೆಂದಿತೋ ನೋಡಿ ಅಮ್ಮ! ಸ್ವಲ್ಪ ಒಳಗೆ ಬನ್ನಿ

**ಮನೋಹರ**-ನೋಡಿ, ನೋಡಿ ನನ್ನ ಹಣೆಬರಹಕ್ಕೆ ಸಿಕ್ಕಿದ ಹುಡುಗನೊಬ್ಬ! ಎಷ್ಟು ಹೇಳಿದರೂ ಅನ್ನ ಬೆಂದಿತೋ ನೋಡಿ ಬಾಗಿಸಲಿಕ್ಕೆ ಬರುವುದಿಲ್ಲ ನೋಡಿ ಇವನಿಗೆ! (ಹುಡುಗನ ಕಡೆ ತಿರುಗಿ ಅವನ ಕಿವಿ ಹಿಂಡಿ ನೀನೇನು ಇನ್ನೂ ಹಲ್ಲುಬಾರದ ಮಗುವೋ ಮೂರ್ಖ? ಬೇತಾಳನ ಹಾಗೆ ಬೆಳೆದಿದ್ದೀಯಲ್ಲ! ಯಾಕೆ? (ಭರದಿಂದ ಒಳಗೆ ಸರಿಯುವಳು)

**ಮನೋಹರ**-ನೋಡಿದೆಯಾ ಎಡ್ಯುಕೇಟೆಡ್ ವೈಫಿನ (ವಿದ್ಯಾವತಿ ಹೆಂಡತಿ) ರೀತಿ! ಹೀಗೆ ಮಾಡಿದ್ರೆ ಯಾರು ಕೆಲಸಕ್ಕೆ ನಿಂತಾರು ಈ ಮನೆಯಲ್ಲಿ? ಆವನೊಬ್ಬ ಬರೇ ಥಪ್ಪರ್ (ಬುದ್ಧಿ ಶೂನ್ಯ) ಆದುದಕ್ಕಾಯಿತು! ಸ್ವಲ್ಪ ಬ್ರೈನ್ (ಬುದ್ಧಿ) ಇದ್ದರೆ ಯಾವಾಗ ಓಡಿ ಬಿಡುತ್ತಿದ್ದ!

**ಅರವಿಂದ**-ಇದಂತಿರಲಿ. ನಿನ್ನ ಕೆಲಸ ಹೋದುದು ಹ್ಯಾಗೆ ಮನೋಹರ?

**ಮನೋಹರ**-ಈಗಿನ ನಮ್ಮ ಮೆನೇಜರನಿಗೂ ನನಗೂ ಸರಿಹೋಗುವುದಿಲ್ಲ. ಅವನಿಗೆ ನನ್ನ ಮೇಲೆ ಮೊದಲಿಂದಲೂ ಕಣ್ಣಿತ್ತು. ಆದರೆ ನಾನು ಕೆಲಸ ಸರಿ ಮಾಡುತ್ತಿದ್ದೆ. ಮದುವೆಯಾದ ಮೇಲೆ ಕೆಲಸ ಚೆನ್ನಾಗಿ ಮಾಡಿಕ್ಕಾಗಲಿಲ್ಲ ನನಗೆ ಇವಳ ಕಾಟದಿಂದ. ಅವನಿಗೆ ಬೇಕಾದ ಕಾರಣ ದೊರೆಯಿತು.

**ಅರವಿಂದ**-ಇನ್ನೇನು ಮಾಡುವೆ?

**ಮನೋಹರ**-ಇನ್ನೇನು ಮಾಡುವುದು? ಬಿಕ್ಕೆ ಬೇಡುವುದು ಈ ಎಡ್ಯುಕೇಟೆಡ್ ವೈಫನ್ನು (ವಿದ್ಯಾವಂತ ಹೆಂಡತಿಯನ್ನು) ಕುತ್ತಿಗೆಗೆ ಕಟ್ಟಿಕೊಂಡು.

**ಅರವಿಂದ**-ಯಾಕೆ ಹಾಗೆನ್ನುವೆ ಮನೋಹರ!

**ಮನೋಹರ**-ಮತ್ತೇನೆನ್ನಲಿ ಅರವಿಂದ? ಈ ಮಾರಿಯನ್ನು ಕಟ್ಟಿಕೊಂಡು ನಾನಿನ್ನೇನು ಮಾಡುವುದು? ಏನು ನನ್ನ ಗತಿಯಿನ್ನು? (ಕಣ್ಣೀರಿಡುವನು)

ಅರವಿಂದ-ನಾನು ಮೊದಲೇ ಹೇಳಿದ್ದೆ ನಿನಗೆ, "ಕೆಲಸದಿಂದ ಬಿಡಿಸಬೇಡ ನಿನ್ನ ಹೆಂಡ್ತಿಯನ್ನು, ಸಂದರ್ಭ ಹ್ಯಾಗೆ ನಿಲ್ಲುವದೆಂದು ಹೇಳಬರುವುದಿಲ್ಲ" ಎಂದು. ನೀನು ಕೇಳಲಿಲ್ಲ. ಅವಳು ಕೆಲಸದಲ್ಲಿರುವುದು ನಿನ್ನ ಡಿಗ್ನಿಟಿಗೆ (ಗೌರವಕ್ಕೆ) ಕೊರತೆಯೆಂದೆ. ಈಗೇನು ಮಾಡುವೆ?

ಮನೋಹರ-ಏನು ಮಾಡಲಿ ಅರವಿಂದ?

ಅರವಿಂದ-ಮಾಡುವುದೇನು? ಕೆನರಾ ಗರ್ಲ್ಸ್ ಸ್ಕೂಲಿಗೊಬ್ಬಳು ಮಿಸ್ಟ್ರೆಸ್ ಬೇಕಂತೆ. ಮನೋರಮೆಯನ್ನು ನೇಮಿಸುವಂತೆ ನಾನು ಮೆನೇಜರೊಡನೆ ಮಾತಾಡಿ ಪ್ರಯತ್ನಿಸುವೆನು. ನನಗವರ ಪರಿಚಯವಿದೆ.

ಮನೋಹರ-ಆಯ್ತು ಅರವಿಂದ, ಹುಡುಗಿಯರ ಶಾಲೆಯಲ್ಲಿ ಮಿಸ್ಟ್ರೆಸ್ ಆಗಿರುವುದಕ್ಕೇನೂ ನನ್ನ ಅಡ್ಡಿಯಿಲ್ಲ. ಇಲ್ಲವಾದರೆ ಬರುವ ತಿಂಗಳ ಎಕ್ಸ್‌ಪೆನ್ಸಿಗೆ (ವೆಚ್ಚಕ್ಕೆ) ಗತಿಯಿಲ್ಲ.

ಅರವಿಂದ-ಆಯ್ತು, ಇಂದೇ ಮಾತಾಡುತ್ತೇನೆ ನನಗೆ ಸ್ವಲ್ಪ ಬೇರೆ ಕೆಲಸವಿದೆ ನಾಳೆ ಬರುತ್ತೇನೆ ಗುಡ್ ಈವ್ನಿಂಗ್. (ನಮಸ್ಕಾರ) ಮನೋರಮೆಯೊಡನೆ ನಾಳೆ ಬರುವೆನೆಂದು ಹೇಳು (ಹೋಗುವನು)

## ೪ನೇ ನೋಟ

(ಮನೋಹರನು ಜೀವನದಲ್ಲೇ ಜಿಗುಪ್ಸೆಗೊಂಡವನಾಗಿ ಸ್ವಲ್ಪ ವಿಳಂಬವಾಗಿ ಎದ್ದು ಅವಸರದಿಂದ ಕಾಫಿ ತಯಾರಿಸುತ್ತಿರುವನು. ಮನೋರಮೆಯು ಬಹಳ ತಡವಾಗಿ ಎದ್ದು ಘಂಟೆ 7ವರೆ ಆದುದನ್ನು ನೋಡಿ ಕಣ್ಣೊರಸುತ್ತಾ ಅವಸರದಿಂದ ಹಾವಡಿಗೆ ಬಂದು)

ಮನೋರಮೆ-(ಮೇಜಿಯ ಮೇಲಿದ್ದ ರಿಸ್ಟ್‌ವಾಚ್ ನೋಡಿ) ಛೆ! ಹಾಫ್ ಪಾಸ್ಟ್ ಸೆವೆನ್ (ಏಳುವರೆ ಘಂಟೆ) ಆಗಿ ಹೋಯಿತು! ಎಂಟಕ್ಕೊಂದು ಎಂಗೇಜ್‌ಮೆಂಟು (ಕೆಲಸ) ಉಂಟು! ರಂಗ! ರಂಗ! (ಗಟ್ಟಿಯಾಗಿ ರಂಗನನ್ನು ಕರೆಯುವಳು ರಂಗನು ಒಳಗಿನಿಂದಲೇ 'ಓ' ಎಂದು ಕೂಗಿ ಸುಮ್ಮನಾಗುವನು) ರಂಗ! ರಂಗ! ಎಲ್ಲಿ ಸತ್ತು ಹೋದಿಯೋ ಪಟಿಂಗ!

ರಂಗ-(ಒಳಗಿಂದಲೆ) ಬಂದೆ ಅಮ್ಮಾ ಬಂದೆ! ರಾಯರು ಕಾಫಿ ತಯಾರಿ

ಸುತ್ತಿದ್ದಾರೆ ನಾನು ಕಪ್ ತೊಳೆಯುತ್ತಿದ್ದೇನೆ. ಯಾರು ಬೇಕಮ್ಮ ನಿಮಗೆ ನಾನೋ ರಾಯರೋ?

ಮನೋರಮೆ-ನೀನಾಗಲಿ ರಾಯರಾಗಲಿ ಒಂದು ತಂಬಿಗೆ ನೀರು ತನ್ನಿಲ್ಲಿ ಮುಖ ತೊಳೆಯುಲಿಕ್ಕೆ. (ತುಸುಹೊತ್ತು ಕಾದು ಯಾರೂ ನೀರು ತರದಿರಲು ಸಿಟ್ಟಿನಿಂದ ಒಳಹೋಗಿ ರಂಗನನ್ನು ಕಿವಿಹಿಡಿದು ಹೊರಗೆಳೆತಂದು) ಯಾಕೋ ನೀರು ತರಲಿಲ್ಲ ಮೂರುಕಾಸಿನವನೇ!

**ರಂಗ**-ಅಯ್ಯಯ್ಯೋ! ದಮ್ಮಯ್ಯ ಕಿವಿ ಬಿಡಿಯಮ್ಮ ಎಷ್ಟು ಸಲ ಹೇಳುವುದಮ್ಮ ನನ್ನ ಕಿವಿ ಮಾತ್ರ ಹಿಡಿಯಬೇಡಿ, ಮತ್ತೇನು ಬೇಕಾದರೂ ಮಾಡಿಯೆಂದು!

**ಮನೋರಮೆ** ನನಗೆ ನಿನ್ನ ಕಿವಿಯೇ ಹಿಡಿಯಬೇಕು ಏನಾಗುತ್ತದೆ ನೋಡುವ! ಯಾಕೆ ನೀರು ತರಲಿಲ್ಲ ಹೇಳು ಮೊದಲು (ಗಟ್ಟಿಯಾಗಿ ಹಿಂಡುವಳು)

**ರಂಗ** — ಆಯಿ! ಆಯಿ! ಹೇಳುತ್ತೇನಮ್ಮ ಹೇಳುತ್ತೇನೆ. ರಾಯರು ನೀರು ತೆಗೆದುಕೊಂಡು ಹೋಗಲು ಕೇಳಲಿಲ್ಲ. ನನ್ನ ಕೈತುಂಬಾ ಸಾಬೂನಿತ್ತು.

**ಮನೋರಮೆ** – ಏನಂದ್ರು?

**ರಂಗ** — ಬೇಕಾದ್ರೆ ಕೊಂಡುಹೋಗು. ನನ್ನ ಹೆಂಡತಿಗೆ ಮುಖ ತೊಳೆಯುಲು ನಾನು ನೀರು ತೆಗೆದುಕೊಂಡು ಹೋಗಿ ಕೊಡುವುದು ನನ್ನ ಗೌರವಕ್ಕೆ ಕುಂದು ಎಂದು.

**ಮನೋರಮೆ** - ಹೆಂಡ್ತಿಗೆ ಗಂಡ ಕಾಫಿ ಮಾಡಿ ಕೊಡಬಹುದಂತೇನೋ?

**ರಂಗ**— ಕಾಫಿ ಮಾಡಿಕೊಡುವುದು ಮನೆ ಒಳಗಂತೆ. ಯಾರೂ ನೋಡುವುದಿಲ್ಲವಂತೆ ಅದನ್ನು.

**ಮನೋರಮೆ**— ಹಾಗಾದ್ರೆ ಗುಟ್ಟಾಗಿ ಹೆಂಡ್ತಿ ಚಾಕ್ರಿ ಮಾಡಬಹುದಂತೆಯೋ?

**ರಂಗ**— ನನಗೇನು ಗೊತ್ತದೆಲ್ಲಾ ನಿಮ್ಮ ಗಂಡ ಹೆಂಡಿರ ಸಂಗತಿ?

ಮನೋರಮೆ- ಕರೆ ನಿನ್ನ ರಾಯರನ್ನಿಲ್ಲಿ.

ರಂಗ — (ಒಳಗೆ ಹೋಗುತ್ತಾ) ರಾಯರೇ ರಾಯರೇ ಇಲ್ಲಿ ಬರಬೇಕಂತೆ (ಒಳ ಹೋಗಿ ಮನೋಹರನನ್ನು ಕಳುಹಿಸುವನು. ಮನೋಹರನು ಒಂದು ಗಂಜಿಪರಾಕು, ಮುಂಡು ಮತ್ತು ಬೈರಾಸು ಹಾಕಿಕೊಂಡು ಎದುರು ಭಾಗಕ್ಕೊಂದು ಕಪ್ಪು ವಸ್ತ್ರ ಕಟ್ಟಿಕೊಂಡು ತಲೆಬಾಗಿ ನಿಲ್ಲುವನು.)

ಮನೋರಮೆ- (ವ್ಯಂಗವಾಗಿ ನಕ್ಕು) ಪಕ್ಕಾ ಬಟ್ಲರಾಗಿ (ಅಡಿಗೆಯವರಾಗಿ) ಹೋಗಿದ್ದೀರಿ ನೀವೀಗ!

ಮನೋಹರ - (ಕಣ್ಣೆತ್ತಿ ದುರದುರನೆ ನೋಡಿ) ಏನಂದೀ

ಮನೋರಮೆ— ಏನು? ಎದುರುಮಾತಾಡುವಿರೋ?

ಮನೋಹರ- (ಕೋಪವನ್ನು ಕಟ್ಟಿಕೊಂಡು) ಇಲ್ಲ. (ಸುಮ್ಮನಾಗುವನು)

ಮನೋರಮೆ– ನೀವ್ಯಾಕೆ ನನ್ನನ್ನು 7 ಘಂಟೆಗೆ ಎಬ್ಬಿಸಲಿಲ್ಲ? 8 ಘಂಟೆಗೊಂದು ಎಂಗೇಜ್‌ಮೆಂಟಿದೆ (ಕೆಲಸವಿದೆ)ಯೆಂದು ನಾನು ಹೇಳಿಲ್ವೇನು

ಮನೋಹರ — (ತಲೆತುರಿಸುತ್ತಾ) ಹೌದು ಹೇಳಿದ್ದೆ. ನಾನೇನು ಮಾಡಬೇಕಿತ್ತದಕ್ಕೆ?

ಮನೋರಮೆ— ನೀವೇನು ಮಾಡಬೇಕಿತ್ತು! 6½ ಘಂಟೆಗೆದ್ದು 'ರಂಗನಾಯಕ ರಾಜೀವ ಲೋಚನೆ ರಮಣೀ ನೀ ಬೆಳಗಾಯಿತೇಳೆನುತಾ" ಎಂದು ಗಟ್ಟಿಯಾಗಿ ಉದಯರಾಗ ಹಾಡಬೇಕಿತ್ತು.

ಮನೋಹರ— ನಾನೇ?

ಮನೋರಮೆ- ಹೌದು ನೀವೇ.

ಮನೋಹರ— ಎಷ್ಟಾದರೂ ನಿನ್ನ ಗಂಡನಲ್ಲವೇ ನಾನು ಮನೋರಮಾ

ಮನೋರಮೆ– ಗಂಡನಾದ್ರೆ ಕೋಡುಂಟೇ ನಿಮಗೆ? ಸಂಪಾದಿಸಿ ಹಾಕುವವಳು ಹೆಂಡ್ತಿಯಿರುವಾಗ ಗಂಡನಾದವನೇಕೆ ಹೆಂಡ್ತಿ ಕೆಲಸ ಮಾಡಬಾರದು? ಗಂಡಸು ಸಂಪಾದಿಸಿ ಹಾಕುವಾಗ ಹೆಂಡ್ತಿ ಕತ್ತೆಚಾಕರಿ ಮಾಡುವುದಿಲ್ಲವೇನು?

ಮನೋಹರ— ಎಷ್ಟಾದರೂ ಗಂಡಸು ಹೆಂಗಸಿನಂತಿರಲಾಗುತ್ತದೆ

ಯೋ ಮನೋರಮಾ? ಗಂಡಸು ಗಂಡಸೇ, ಹೆಂಗಸು ಹೆಂಗಸೇ.

**ಮುರಳೀಧರ**-- (ವ್ಯಂಗವಾಗಿ) ಗಂಡಸು ಗಂಡಸೇ! ಹೆಂಗಸು ಹೆಂಗಸೇ. ನೋಡುತ್ತೇನೆ ನಾನು ನಿಮ್ಮ ಗಂಡಸುತನ ಎಲ್ಲಿವರೆಗೆ ಬರುತ್ತದೆಂತ! ಎಲ್ಲಿ ಉಂಟೀಗ ಕಾಫಿ?

**ಮನೋಹರ**— ರಂಗ! ರಂಗ! (ಗಟ್ಟಿಯಾಗಿ ಕರೆಯುವನು) ಎಲ್ಲಿ ಹೋದಿಯೋ? ಟೇಬ್ಲ್‌ನಲ್ಲಿದ್ದ (ಮೇಜಿಯ ಮೇಲಿದ್ದ) ಕಾಫಿಯನ್ನು ಕಪ್ಪಿಗೆ ಹೊಯ್ದು ತಾರೋ ಇಲ್ಲಿ

**ರಂಗ**— (ಒಳಗಿನಿಂದಲೇ) ಅಯ್ಯಯ್ಯೋ! ಕೈಯೆಲ್ಲಾ ಸುಟ್ಟುಹೋಯಿತು. [ಗಟ್ಟಿ ಬೊಬ್ಬೆ ಹಾಕುವನು]

**ಮನೋರಮಾ**- ನನಗೆ ಗೊತ್ತದು! ನಿಮಗೊಬ್ಬ ಚಾಕರಿಯುವ! ನಿಮಗೆ ಹೋಗಿ ತರ್ಲಿಕ್ಕೇನು

**ಮನೋಹರ**- ಮನೊರಮಾ ಸ್ವಲ್ಪ ಮೆಲ್ಲಗೆ ಮಾತಾಡು, ಯಾರಾದರೂ ಕೇಳಿದ್ರೆ!

**ಮನೋರಮಾ**- ಕೇಳಿದ್ರೇನಾಯಿತು ಈ ಮನೆಯ ಯಜಮಾನ ನಾನೆಲ್ಲವೇ ನನ್ನಿಚ್ಛಾನುಸಾರ ಮಾತಾಡುವೆನು. ಯಾರು ಕೇಳಿದರೇನು ಗಂಡಸನ್ನು ಮಾತ್ರ ತಾಯಿ ಹೆತ್ತದು, ಸ್ತ್ರೀಯನ್ನಲ್ಲವೇ ಅವಳೆಲ್ಲಿಯಾದರೂ ಕತ್ತೆಯ ಹೊಟ್ಟೆಯಿಂದ ಬಂದವಳೇ ಅವಳು ಸಂಪಾದಿಸಿಹಾಕುವಾಗಯಾಕೆ ಅಧಿಕಾರ ನಡಿಸಬಾರದು? ಗಂಡಸಿಗೆ ಮಾತ್ರ ಸ್ತ್ರೀಯ ಮೇಲೆ ಅಧಿಕಾರ ನಡೆಸುವ ಹಕ್ಕೇ? ಹೋಗ್ಹೋಗಿ ಕಾಫಿ ತಂದಿಡಿ ಈಗ.(ರಿಸ್ಟ್‌ವಾಚ್ ನೋಡಿ) ಸಮಯವಾಯ್ತು ನನಗೆ. ನಾನು ಬಚ್ಚಲಿಗೆ ಹೋಗಿ ಮುಖ ತೊಳೆದು ಬರುತ್ತೇನೆ. ನೀರು ಹಾಕಿದ್ದೀರಲ್ಲ ಹಂಡೆಗೆ? (ಹೋಗಿಬಿಡುವಳು)

**ಮನೋಹರ**—ಹೌದು (ಒಳಗೆ ಹೋಗಿ ಮೆಲ್ಲಗೆ ಬಂದು ಕಪ್ ಕಾಫಿ ತಂದಿಟ್ಟು ನಿಟ್ಟುಸಿರಿಟ್ಟು ಗೊಂಬೆಯಂತೆ ನಿಂತುಕೊಳ್ಳುವನು. ರಂಗ ಅವನ ಹಿಂದಿನಿಂದಲೇ ಜೋಲುಮೋರೆ ಹಾಕಿಕೊಂಡು ಬಂದು)

**ರಂಗ**_ಯಾಕೆ ರಾಯರೇ ಬಹಳ ದುಃಖ ಪಡುತ್ತಿದ್ದೀರಿ? ನನಗೆ ಅಮ್ಮ ಮೊದಲು ದಿನಕ್ಕೊಂದು ಸಾವಿರ ಬೈದು ಸರಿ ಪೆಟ್ಟು ಕೂಡಾ ಕೊ

ತ್ತಿದ್ದಿಲ್ವೇ? ನಾನೇನು ಹೀಗೆ ದುಃಖಿಸುತಿವ್ವೆನೇ ನಿಮಗೆ ಬೈಯ್ಯುವುದು
ಾತ್ರ. ಪೆಟ್ಟು ಕೊಡುವುದಿಲ್ಲ.

ಮನೋಹರ—ಆ ಕಾಲವೂ ಬಹುದೂರವಿರಲಿಕ್ಕಿಲ್ಲ ರಂಗ!

ಮನೋರಮೆ— (ಅವಸರದಿಂದ ಪ್ರವೇಶಿಸಿ ಕಾಫಿಯನ್ನು ಬಿರಳುಹಾಕಿ
ೀಡಿ) ಇದ್ಯಾಕೆ ನಿಮ್ಮ ತಲೆಗೆ ಹ್ಯೊಕೊಳ್ಳಲಿಕ್ಕೋ ಇದಕ್ಕಿಂತ ತಣ್ಣೀರು
ಡಿವರೇನು? ಇಷ್ಟು ಸಮಯ ಆಯಿತು, ಒಂದು ಕಾಫಿ ಸಹ ಸರಿಯಾಗಿ
ಾಡುವುದಕ್ಕೆ ತಿಳಿಯುವುದಿಲ್ಲೆಂದ್ರೆ ಇನ್ನೇನು ಮಾಡುವಿರಿ ನೀವು? ಊಟ
ತೂ ಒಂದುದಿನ ಕೂಡಾ ಸರಿಯಾಗಿ ಮಾಡ್ಲಿಕ್ಕಿಲ್ಲವಲ್ಲ? ನಾನೇನು
ುಕಬೇಕೋ ಬೇಡವೋ? ಹೀಗೆಲ್ಲಾ ಮಾಡಿದರೆ ನಾನೇ ಮನೆಬಿಟ್ಟು
ೀಗಬಹುದು.

ಮನೋಹರ—ನಾನೇನು ಮಾಡುವುದು?

ಮನೋರಮೆ—ನೀವೇನು ಮಾಡುವುದು?! ನಿಮ್ಮನ್ನು ತರಬೇತು
ಡ್ಲಿಕ್ಕೆ ಫಸ್ಟ್‌ಕ್ಲಾಸ್ ಬಟ್ಲರನೊಬ್ಬನನ್ನು (ಒಳ್ಳೇ ಅಡಿಗೆಯವನೊಬ್ಬ
) ಕರೆತರಲೇ?

ರಂಗ—ಬೇಡಮ್ಮ ಬೇಡ ಅವರು ಕ್ರಮೇಣ ಸ್ವಲ್ಪ ಸ್ವಲ್ಪ ಕಲಿತು
ಶಾರಾಗುತ್ತಾರೆ. ಈಗ ಸ್ವಲ್ಪ ಸಮಯ ಮಾತ್ರ ಆದುದಲ್ಲವಮ್ಮ ರಾಯ
ಅಡಿಗೆ ಮಾಡಲಾರಂಭಿಸಿ

ಮನೋರಮೆ—ಹೌದೌದು! ಇವರು ಹುಶಾರಾಗುವುದಿನ್ನು ಒಂದೇ
! ಅದಂತಿರಲಿ ರಂಗ, ನಾನು ಇಲ್ಲಿಂದ ಹೋದ ಮೇಲೆ ಇವರು ಮನೆಯ
ೀ ಇರುತ್ತಾರೊ, ಎಲ್ಲಿಯಾದರೂ ಹೊರಗೆ ಹೋಗುತ್ತಾರೋ?

ರಂಗ—ಎಲ್ಲಿಯೂ ಹೋಗುವುದಿಲ್ಲಮ್ಮ! ಪಾಪ ಅವರು!

ಮನೋರಮೆ—ಏನು ನೀನೂ ಅವರೊಂದಿಗೆ ಸೇರಿರುವೆಯಾ ನೀಚಾ?
ಹಿಡಿಯ ಹೋಗುವಳು)

ರಂಗ—ಇಲ್ಲ, ಇಲ್ಲ, ಹೇಳುತ್ತೇನಮ್ಮಾ ದಮ್ಮಯ್ಯ ಕಿವಿ ಮಾತ್ರ ಹಿಡಿಯ
, ತಲೆಗೆ ಎಷ್ಟು ಕುಟ್ಟಿ ಬೇಕಾದರೂ ಹೊಡೆಯಿರಿ. ನನ್ನ ಪ್ರಾಣವಿರು
ಳವೇ ಕಿವಿಯಮ್ಮ

ಮನೋರಮೆ-ಹಾಗಾದರೆ ಹೋಗಲಿ ನೋಡುವ ನಿನ್ನ ಪ್ರಾಣ (ಸಂ ಯಾಗಿ ಕಿವಿ ತಿರುವಿ] ಬಿಡುವಳು

ರಂಗ-ಅಯ್ಯಯ್ಯೋ ಸತ್ತೆ ಸತ್ತೆ! ಹೇಳುತ್ತೇನಮ್ಮಾ ಹೇಳುತ್ತೇನೆ. ನೀವು ಇಲ್ಲಿಂದ ಹೋದಕೂಡ್ಲೆ ಹೊರಟು ನೆರಮನೆಯಲ್ಲೆಲ್ಲಾ ತಿರುಗಾಡಿ ಮಧ್ಯಾಹ್ನ ನೀವು ಬರುವುದಕ್ಕಿಂತ ಸ್ವಲ್ಪ ಮುಂಚೆ ಬರುತ್ತಾರಮ್ಮ ಮಧ್ಯಾಹ್ನ ನೀ ಹೋದಮೇಲೆ ಹೊರಟು ಹೋದವರು ಸಂಜೆ ನೀವು ಬರುವುದಕ್ಕಿಂತ ಸ್ವಲ್ಪ ಮುಂಚೆ ಬರುತ್ತಾರೆ. 'ಅಮ್ಮನತ್ರ ಹೇಳ್ಬೇಡ ದುಡ್ಡು ಕೊಡ್ತೇನೆ ನಿನಗ' ಎಂದಿದ್ದಾರಮ್ಮಾ ಇಷ್ಟರವರೆಗೆ ಒಂದು ಪೈ ಕೂಡಾ ಕೊಡ್ಲಿಲ್ಲ.

ಮನೋಹರ—ಏನಂದಿ ನೀಚಾ (ರಂಗನನ್ನು ಹೊಡೆಯಲು ಮುಂದುವರಿಯುವನು)

ಮನೋರಮೆ – ಸಾಕು ಸಾಕು ದರ್ಬಾರೆಲ್ಲ! ಕಟ್ಟಿಡಿ ನಾನೆಲ್ಲಾ ಬಲ್ಲೆ! ನೀವು ಮನೆ ಮನೆ ಅಡ್ಡಾಡಿ ಸಿಕ್ಕ ಸಿಕ್ಕ ಹೆಂಗಸರೊಡನೆಲ್ಲಾ ಮಾತಾಡುತ್ತಿರುವಿರೆಂದು ಮಿಸ್ ರಮಣಿ ಹೇಳಿದಳು.

ಮನೋಹರ- ಇಲ್ಲ ಮನೋರಮಾ ಇಲ್ಲ ಎಲ್ಲಿಯಾದರೂ ಒಮ್ಮೊಮ್ಮೆ ಒಳಗೆ ಕೂತು ಕೂತು ಬೇಸರವಾದಾಗ ನಾನು ನೆರೆಮನೆ ಗಂಗಮ್ಮನವರ ಮನೆಗೆ ಮಾತ್ರ ಹೋದುದು. ಅವರು 60 ವರ್ಷದ ಮುದುಕಿಯೆಂದು ನೀನೇ ಬಲ್ಲೆಯಲ್ಲ ಯಾವ ಸುಖದಲ್ಲಿ ನಾನು ಮನೆ ಮನೆ ತಿರುಗಾಡುವುದು ?

ಮನೋರಮೆ–ನಿಮಗೇನಾಗಿದೆ ಈಗ? ಯಾವಾಗಲೂ ಮನೆಯೊಳಗೇ ಇರಬೇಕು. ಮನೆಬಿಟ್ಟು ಹೋಗುವ ಕೆಲಸ ನಿನಗೇನುಂಟು? ನೀವು ಮನೆ ಮನೆ ತಿರುಗುತ್ತಿರುವುದು ನನ್ನ ಗೌರವಕ್ಕೆ ಕುಂದು ಜನರೆಲ್ಲಾ ಏನು ಹೇಳುತ್ತಾರೆ ಬಲ್ಲಿರಾ?

ಮನೋಹರ— ಏನು ಹೇಳುತ್ತಾರೆ?

ಮನೋರಮೆ —"ಮನೋರಮೆಗೊಬ್ಬ ಗಂಡ, ಅವನಿಗೊಂದಿಷ್ಟು ಮಾನ ಮರ್ಯಾದೆ ಇಲ್ಲ ಮನೆಮನೆ ಅಡ್ಡಾಡುತ್ತಿರುವುದು. ಸಿಕ್ಕಸಿಕ್ಕ

ರೊಡನೆಲ್ಲಾ ಮಾತಾಡುವುದು. ಅವನಿಗೇನು ಕೇಳುವವರಿಲ್ಲವೋ" ಎನ್ನು ತ್ತಿದ್ದಾರೆ

ಮನೋಹರ —ಆಯ್ತು. ಇನ್ನಾ ಮುದುಕಿ ಗಂಗಮ್ಮನ ಮನೆಗೂ ಹೋಗುವುದಿಲ್ಲ

ಮನೋರಮ —(ರಿಸ್ಟ್ ವಾಚ್ ನೋಡಿ) ನನಗೆ ಹೋಗಬೇಕೀಗ ನಿಮ್ಮೊಡನೆ ಮಾತಾಡುತ್ತಾ ಕಾಲಕಳೆಯಲು ಸಮಯವಿಲ್ಲ. ಸಾಮಾನಿ ಗೆಲ್ಲಾ ಎಷ್ಟು ಹಣಬೇಕು? ಬೇಗ ಹೇಳಿ.

ಮನೋಹರ —ಹತ್ತು ಹನ್ನೆರೆಡು ಆಣೆ ಬೇಕು.

ಮನೋರಮ —ಹ್ಞಂ. ಹತ್ತು ಹನ್ನೆರಡಾಣೆ! ಇನ್ನು ಲೆಕ್ಕ ಬರು ವುದಿಲ್ವೋ ನಿಮಗೆ? ಹೀಗೆ ಖರ್ಚುಮಾಡಿದ್ರೆ ಮನೆ ಉಳಿವ ಹಾಗಿಲ್ಲ ಬೇಗ ದಿವಾಳಿ ಹೋಗಬೇಕಾದೀತು!

ಮನೋಹರ —(ತಲೆತುರಿಸಿ) ಮನೋರಮಾ, ನನಗೊಂದು ಮುಂಡು

ಮನೋರಮ —ಮುಂಡಾಗಿಂಡೆಲ್ಲಾ ಈಗ ಬೇಡ ಇನ್ನೊಮ್ಮೆ ನೋ ಡುವ. ಈಗ ದುಡ್ಡಿಲ್ಲ ಇಗೊಳ್ಳಿ ನಾಲ್ಕಾಣೆ [ಕೈಚೀಲದಿಂದ ನಾಲ್ಕಾಣೆ ಕೊಟ್ಟು ಹೊರಟುಹೋಗಿಬಿಡುವಳು.]

ಮನೋಹರ [ಬಹಳ ಚಿಂತಾಮಗ್ನನಾಗಿ] ರಂಗ ನಾನೆಲ್ಲಿಯಾದರೂ ಹೊರಟುಹೋಗಿ ಸನ್ಯಾಸಿಯಾಗುತ್ತೇನೆ. ಇಲ್ಲವಾದರೆ ಏನಾದರೂ ಮಾಡಿ ಆತ್ಮಹತ್ಯೆಯಾದರೂ ಮಾಡಿಕೊಳ್ಳುತ್ತೇನೆ. ಸಾಕಾಯಿತು ನನಗೆ ಈ ಬಾಳು.

ರಂಗ —ನೀವು ಹೋದ್ರೆ ನಾನೂ ಬರುತ್ತೇನೆ ಸ್ವಾಮಿ ನಿಮ್ಮೊಂದಿಗೆ. ಒಟ್ಟಿಗೆ ಹೋಗೋಣ

ಮನೋಹರ —ಎಲ್ಲಿ ಹೋಗುವುದು? ಏನು ಮಾಡುವುದು?

ರಂಗ —ಬೊಂಬಾಯಿಗೆ ಹೋಗಿಬಿಡುವ ಸ್ವಾಮಿ. ಕಾಫಿ ಹೋಟೇಲಿ ನವನೊಬ್ಬನು ನನ್ನನ್ನು ಕರಕೊಂಡು ಹೋಗುತ್ತೇನಂತ ಹೇಳಿದ್ದಾನೆ. ನಿಮ್ಮನ್ನೂ ಕರಕೊಂಡು ಹೋದಾನು.

ಮನೋಹರ —ರಂಗ ನೀನಿಲ್ಲಿರು ನಾನು ಅರವಿಂದನ ಮನೆಗೆ

ಹೋಗಿ ಅವನೊಡನೆ ಒಂದು ಮಾತು ಹೇಳಿಬರುತ್ತೇನೆ. ಅವನು ಮಾಡಿದ ಮದುವೆ ನನಗೆ. ಅವನಿಗೂ ಮನೋರಮೆಗೂ ಸಂಬಂಧವುಂಟಂತೆ.

**ರಂಗ** —ಮನೆಬಿಟ್ಟು ಹೋಗಬಾರದೆಂದು ಹೇಳಿದಲ್ವೋ ಸ್ವಾಮಿ. ಅಮ್ಮನವರು?

**ಮನೋಹರ** -ಸತ್ತಳವಳು. ಮರ್ಯಾದೆಗೆ ಹೆದರಿ ನಾನಿಷ್ಟರವರೆಗೆ ಸಹಿಸಿಕೊಂಡಿದ್ದೆ. ಇಡೀ ಮುಳುಗಿದ ಮೇಲೆ ಚಳಿಯೇನಿನ್ನು ನಾನಿಂದೆ ಅವಳನ್ನು ಬಿಟ್ಟುಹೋಗುವೆನು.

**ರಂಗ** —ಅವರು ಹಿಡಿದು ತಂದೆ?

**ಮನೋಹರ** ....(ನಕ್ಕು) ಏನು ಹೇಳುವೆಯೋ ಮೂರ್ಖ ನನ್ನನ್ನವಳು ಹಿಡಿದುತರುವುದೆ ನಾನು ಗಂಡಸಲ್ಲವೇ? ಅರವಿಂದನೊಡನೆ ಒಂದು ಮಾತು ಹೇಳಿ ಆ ಮೇಲೆ ನಾನು ಮಾಡುವುದು ಮಾಡುತ್ತೇನೆ.

**ರಂಗ** -ಹೌದು ಇದೆಲ್ಲಾ ಈಗ ಹೇಳುವುದು ಅಮ್ಮನವರು ಇಸ್ಕೂಲಿನಿಂದ ಬಂದ ಮೇಲೆ ಮತ್ತೆ ಸುದ್ದಿಯಿಲ್ಲ ನಿಮ್ಮದು.

**ಮನೋಹರ** -ನೋಡು ಇವತ್ತೇನು ಮಾಡುತ್ತೇನಂತ! (ಹೋಗಿಬಿಡುವನು.)

**ರಂಗ** -ನಾನೆಲ್ಲಿಯೂ ನೋಡಲಿಲ್ಲಪ್ಪ ಇಂತಹ ಸಂಗತಿ! ಹೆಂಡ್ತಿ ಚಾಕರಿ ಗಂಡ ಮಾಡುವುದೆಂದರೆ ಅಡಿಗೆ ಕೂಡಾ ಅವರೇ ಮಾಡಬೇಕಂದ್ರೆ ಅವರೇನು ಮಾಡಿಯಾರು ಮತ್ತೆ ಪಾಪ! ನಾನಾಗಬೇಕಿತ್ತು, ನನಗೊಂದು ಇಂತಹ ಹೆಂಡ್ತಿ ಸಿಗಬೇಕಿತ್ತು. ಗುದ್ದಿ ಗುದ್ದಿಯೇ ಹದ್ದಿಗೆ ತರುತ್ತಿದ್ದೆ! ರಾಯರು ಪಾಪದವರು. [ಒಳಗೆ ಹೋಗುವನು]

## ೫ನೇ ನೋಟ

(ಅರವಿಂದನು ತನ್ನ ಮನೆಯ ಚಾವಡಿಯಲ್ಲಿ "ನಾನೊಂದು ಮದುವೆ ಮಾಡಿಕೊಂಡೆ" ಎಂಬ ಪ್ಲೇಟನ್ನೇ ಇಟ್ಟುಕೇಳುತ್ತಾ ಕೂತುಕೊಂಡಿರುವಾಗ ಮನೋಹರನು ಬಹಳ ಖಿನ್ನವಾಗಿ ಪ್ರವೇಶಿಸುವನು.)

**ಅರವಿಂದ**-ಗುಡ್ ಈವ್ನಿಂಗ್ ಮನೋಹರ! (ನಮಸ್ಕಾರ ಮನೋಹರ) ಓಹೋ, ಈ ಪ್ಲೇಟೆಂದರೆ ನಿನಗಾಗುವುದಿಲ್ಲ. ಎಲ್ಲಿಯಾದರೂ ಕೋಪ

ಬಂದು ಒಡೆದುಹಾಕ್ಲಿಕ್ಕೂ ನೀನು ಹಿಂದೆ ಹೋಗ್ಲಿಕ್ಕಿಲ್ಲ. ನನಗೂ ಈಗೀಗ ಇದು ರುಚಿಸುವುದಿಲ್ಲ. ನೋಡು, ಅದನ್ನು ಇಟ್ಟು ಇಟ್ಟಾದರೂ ಹಾಳು ಮಾಡಿ ಬಿಡೋಣವೆಂದು ನಾನು ಇಡುತ್ತಿರುವುದು. ಈಗ್ಲೆ ಒಡೆದು ಹಾಕಿ ಬಿಡ್ಲೇ?

ಮನೋಹರ-ಬೇಡ ಬೇಡ ಅರವಿಂದ! ಅದನೇ ಒಂದು ಹತ್ತು ಸಲ ಬೇಕಾದ್ರೂ ಇಡು. ಅದರಲ್ಲನ್ನುವುದು ಅಕ್ಷರಶಃ ನಿಜ ಅರವಿಂದ.

ಅರವಿಂದ.(ನಸುನಕ್ಕು) ಅದೇನು ಮನೋಹರ?

ಮನೋಹರ-ಆ ಪ್ಲೇಟಿನಲ್ಲೆಂದಂತೆ ನಿಜವಾಗಿಯೂ ಮದುವೆ ಮಾಡಿ ಕೊಳ್ಳುವುದು ಭಂಡ ಬದುಕು. ಅದರಲ್ಲೂ ಎಡ್ಯುಕೇಟೆಡ್ ಗರ್ಲ್ಸ್‌ನ್ನು (ವಿದ್ಯಾವತಿಯರನ್ನು) ಮದುವೆ ಮಾಡಿ ಕೊಳ್ಳುವುದು ಭಂಡತನದಲ್ಲಿ ಭಂಡ ತನ!

ಅರವಿಂದ-ಏನಾಗಿದೆ ನಿನಗೆ ಮನೋಹರ? ನಿನ್ನ ಮೊದಲಿನ ಸ್ಪಿರಿಟೆಲ್ಲಾ (ಉತ್ಸಾಹ) ಎಲ್ಲಿ ಆರಿ ಹೋಯಿತೀಗ?

ಮನೋಹರ-ನನ್ನ ಅದೃಷ್ಟ! ಏನು ಮಾಡುವುದು ಅರವಿಂದ ನನಗೀಗ ಜೀವನವೇ ನಿಸ್ಸಾರವಾಗಿ ತೋರುವುದು ಅಹ! ನಾವು ನೆನಸಿದಾಗ ಸಾಯುವಂತಾಗಿದ್ದರೆ ಎಷ್ಟು ಚೆನ್ನಾಗಿತ್ತು!

ಅರವಿಂದ-ಮನೋಹರ, ಇಂದೇನೋ ನೀನು ನಿರುತ್ಸಾಹಿಯಾಗಿರುವಿ. ನಾನೊಂದು ಉತ್ಸಾಹಪರ ಪ್ಲೇಟನ್ನಿಡುತ್ತೇನೆ. ಕೇಳು (ಅಶ್ವತ್ಥಮ್ಮನ ಪ್ರಿಯಾ ಬಾರೋ ಎಂಬ ಪ್ಲೇಟನ್ನಿಡುವನು)

ಮನೋಹರ-ತೆಗೆ ತೆಗೆ ಆ ಪ್ಲೇಟನ್ನು ಅರವಿಂದ! ರಾಜಯ್ಯಂಗಾರರ ಮನುಜ ಶರೀರವಿದೇನು ಸುಖ ಎಂಬ ಪ್ಲೇಟಿಲ್ಲವೆ ಅದನ್ನಿಡು ನೋಡುವ.

ಅರವಿಂದ-ನೀನು ಅಂದು ಪ್ರೊಟೆಸ್ಟ್ (ಆಕ್ಷೇಪಿಸಿದ) ಮಾಡಿದೆಯೆಲ್ಲಾ, ಮೇಲೆ ಸ್ವಲ್ಪ ಸಮಯದಲ್ಲೇ ಅದನ್ನು ನಾನು ಒಡೆದು ಪುಡಿಮಾಡಿ ಹಾಕಿರುವೆನು. ಈ ಲೋಕದಲ್ಲಿ ಪ್ರತಿಯೊಂದು ಪ್ರಾಣಿಯಿರುವುದು ಸುಖ ಪಡಲಿಕ್ಕಾಗಿ. ಪ್ರಾಣಿಗಳೆಲ್ಲಾ ಶ್ರೇಷ್ಠ ಪ್ರಾಣಿಯಾದ ಮಾನವನೂ ಇರುವುದು ಸುಖ ಸಂತೋಷಕ್ಕಾಗಿ ಅಂದ ಮೇಲೆ 'ಮನುಜ ಶರೀರವಿದೇ

ನು ಸುಖಃ ಎಂದು ವೈರಾಗ್ಯದ ಪದ ಹಾಡುವುದರಲ್ಲಿ ಅರ್ಥವಿದೆಯೋ ಮನೋಹರ?

ಮನೋಹರ-ಸಂಪೂರ್ಣ ಅರ್ಥವಿದೆ, ಅರವಿಂದ!

ಅರವಿಂದ—ಯಾವಾಗಿಂದ ಇದು?

ಮನೋಹರ-ಈ ಜೀವನವೇ ನನಗೆ ಭಾರವಾಗಿದೆ. ಒಂದೋ ನಾನೀ ಜೀವನವನ್ನು ಹೇಗಾದರೂ ಕೊನೆಗೊಳಿಸುವೆನು. ಇಲ್ಲವಾದರೆ ಆ ಮನೋರಮೆಯನ್ನು ಕೊಂದು ಸೇಡು ತೀರಿಸುವೆನು.

ಅರವಿಂದ—ಏನು ಸೇಡು ತೀರಿಸುವುದು ಮನೋಹರ? ಏನೆಲ್ಲಾ ಮಾತಾಡುತ್ತಿರುವೆ ನೀನು?

ಮನೋಹರ—ನನ್ನ ಗಂಡಸುತನವನ್ನೊಮ್ಮೆ ಅವಳಿಗೆ ತೋರಿಸಿಯೇ ಸಿದ್ಧ! ಆದರಿಂದ ನನಗೆ ಫಾಶಿಯಾದರೂ ಚಿಂತೆಯಿಲ್ಲ. ಇಲ್ಲ, ಇಲ್ಲ ಅರವಿಂದ! ನಾನೀ ಅಪಮಾನವನ್ನು ತಾಳಿಕೊಂಡು ಬಾಳಬೇಕಿಲ್ಲ!

ಅರವಿಂದ—ಏನಿದು ಇಷ್ಟೊಂದು ಉದ್ವೇಗ ಮನೋಹರ?

ಮನೋಹರ--ಉದ್ವೇಗವೇ? ಈ ಹೆಂಗಸರಿಗೆ ಸ್ವಾತಂತ್ರ್ಯವಿತ್ತರೆ ಆಗುವ ಪರಿಣಾಮವೇ ಇದು! ಅವರು ಕಡೆಗೆ ನಮ್ಮನ್ನು ಗುಲಾಮರಂತೆ ಕಾಣುವರು.

ಅರವಿಂದ—ಸ್ತ್ರೀ ಸ್ವಾತಂತ್ರ್ಯದ ಸ್ಟ್ರಾಂಗೆಸ್ಟ್ ಎಡ್ವಕೇಟ್ (ಪ್ರಬಲ ಪ್ರತಿಪಾದಕ) ಆಗಿದ್ದೆಯಲ್ಲ ನೀನು ಮನೋಹರ?

ಮನೋಹರ-ಹೌದೌದು ಅದು ಆಗ. ಈಗ ಬುದ್ಧಿ ಬಂತು ನನಗೆ! ಹೆಂಗಸರಿಗೆ ಒಂದಿಷ್ಟು ಸ್ವಾತಂತ್ರ್ಯವೀಯದೆ ಪಂಜರದೊಳಗಿನ ಪಕ್ಷಿಗಳಂತಿಟ್ಟರೇನೇ ಗಂಡಸರು ಅವರೊಂದಿಗೆ ಸಂಸಾರ ನಡಿಸಲು ಸಾಧ್ಯವಿದೆ.

ಅರವಿಂದ— ಮನೋಹರ ಹಾಗೆಲ್ಲ ಉದ್ವೇಗಗೊಳ್ಳಬೇಡ. ಬಾ ನಿಮ್ಮ ಮನೆಗೆ ಹೋಗುವ. ಮನೋರಮೆಯೊಡನೆ ವಿಚಾರಿಸುವ ಸಂಗತಿಯೇನೆಂದು? ನಿನ್ನೊಬ್ಬನ ಹೇಳಿಕೆಯಿಂದಲೇ ತೀರ್ಪುಕೊಡಲು ಸಾಧ್ಯವಿಲ್ಲ.

ಮನೋಹರ—ಅವಳೊಡನೆ ವಿಚಾರಿಸತಕ್ಕದ್ದೇನಿದೆ!

ಅರವಿಂದ. ಅವಳೊಡನೆ ವಿಚಾರಿಸತಕ್ಕದ್ದು ಬಹಳವಿದೆ ನೀನು ಕ್ಷ

ರ್ನಾಗಿ ಸಂಪಾದನೆ ಮಾಡುತ್ತಿದ್ದಾಗ ಅವಳನ್ನು ಹ್ಯಾಗೆ ಕಾಣುತ್ತಿದ್ದಿ?

ಮನೋಹರ- ಇತರರು ತಮ್ಮ ಹೆಂಡಿರನ್ನು ಕಾಣುವ ಹಾಗೆ ಕಂಡಿದ್ದೇನೆ. ಅದೆಲ್ಲಾ ಯಾಕೀಗ?

ಅರವಿಂದ- ಅಂತೆಯೇ ಅವಳು ಸಂಪಾದನೆಮಾಡಿ ಹಾಕುವಾಗ ನಿನನ್ನು ಕಾಣಬಾರದೇಕೆ?

ಮನೋಹರ- ನಾನು ಗಂಡಸು, ಅವಳು ಹೆಂಗಸು.

ಅರವಿಂದ– ನೀನು ಸಂಪಾದಿಸಿ ಹಾಕುವಾಗ ನೀನು ಗಂಡಸು! ನಿನ್ನ ಮೇಲೆ ಹೊಂದಿಕೊಂಡಿರುವ. ನಿನ್ನ ಹೆಂಡತಿಯ ಮೇಲೆ ಅಧಿಕಾರ ನಡಿಸಲು ನಿನಗೆ ಹಕ್ಕುಂಟೆನ್ನುವ? ಹಾಗೆಯೇ ಅವಳು ಸಂಪಾದಿಸಿ ಹಾಕುವಾಗ ಅವಳೇಕೆ ಗಂಡಸಾಗಬಾರದು? ಅವಳ ಮೇಲೆ ಹೊಂದಿರುವ ನಿನ್ನ ಮೇಲೆ ಅಧಿಕಾರ ನಡೆಸಬಾರದೇಕೆ?

ಮನೋಹರ– ಏನಿದು ಅರವಿಂದ? ನೀನೂ ಅವಳ ಪಕ್ಷಹಿಡಿಯುವೆಯಾ? ನಾನಿಲ್ಲಿ ಬಂದುದೇ ತಪ್ಪಾಯಿತು ಹಾಗಾದರೇ?

ಅರವಿಂದ- (ನಸುನಕ್ಕು) ಯಾಕೆ ತಪ್ಪಾಯಿತೂ ಬಾ, ಮನೋಹರಾ ನಿನ್ನ ಮನೋರಮ ಪಾಪ ಎಷ್ಟು ತಳಮಳಗೊಂಡಿರುವಳೋ? ಏನೋ?

ಮನೋಹರ- ಯಾಕೆ ತಳಮಳಗೊಳ್ಳುವುದವಳು?

ಅರವಿಂದ– ತನ್ನ ಮನೋಹರನಿಗಾಗಿ.

ಮನೋಹರ– ಏನಿದು ಅರವಿಂದ ಪರಿಹಾಸ್ಯಕ್ಕಿದು ಸಮಯವೇ?

ಅರವಿಂದ– ದೊಡ್ಡ ಪ್ರಹಸನವೇ ನಡೆದಿರುವಾಗ ನಾನು ಪರಿಹಾಸ್ಯ ಮಾಡುವುದು ತಪ್ಪೇ?

ಮನೋಹರ- ಪ್ರಹಸನವೇನು? ನಿನಗೀ ಅವಸ್ಥೆಯಾಗುತ್ತಿದ್ದರೆ ತಿಳಿಯುತಿತ್ತು!

ಅರವಿಂದ— ನನಗೀ ಅವಸ್ಥೆಯಾಗಲಿಕ್ಕೆ ನಾನು ನಿನ್ನಂತೆ ಸ್ತ್ರೀಸ್ವಾತಂತ್ರ್ಯದ ಸ್ಟ್ರೋಂಚೆಸ್ಟ್ ಎಡ್ವಕೇಟೇನೂ (ಪ್ರಬಲ ಪ್ರತಿಪಾದಕ) ಅಲ್ಲ! ನಾವು ಧೀರರೆ ಮುದ್ದುಮಗಳಂತೆ....

ಮನೋಹರ. ಸಾಕು ಸಾಕು ನಿನ್ನ ತಮಾಷೆ! ನಾನುಹೋಗುವೆನು

ಅರವಿಂದ— [ಸಿಟ್ಟಿನಿಂದ ಹೊರಟು ಹೋಗಲಿದ್ದ ಮನೋಹರನನ್ನು ರಟ್ಟೆ ಹಿಡಿದು ನಿಲ್ಲಿಸಿ] ನಿಲ್ಲು. ನಿಲ್ಲು. ಎಲ್ಲಿ ಹೋಗುವೆ?

ಮನೋಹರ- ಎಲ್ಲಿಗಾದರೂ ಹೋಗಿ ಈ ತುಚ್ಛ ಜೀವನವನ್ನು ಕೊನೆಗೊಳಿಸುವೆನು.

ಅರವಿಂದ – ಮನೋರಮೆಯಂತಹ ಎಜುಕೇಟೆಡ್ [ವಿದ್ಯಾವಂತ] ಮತ್ತು ಎಡ್ವಾನ್ಸ್ಡ್ ವೈಫನ್ನು (ಬಹಳ ಮುಂದುವರಿದ ಪತ್ನಿಯನ್ನು) ಬಿಟ್ಟು!

ಮನೋಹರ— ಸಾಕು, ನಿನ್ನ ಮನೋರಮೆಯಿಂದ ನಾನು ಪಟ್ಟ ಸುಖ ಸಾಕು! ಇನ್ನು ನಾನು ಸತ್ತರೂ ಸದ್ಗತಿಯೇ ಸರಿ!

ಅರವಿಂದ- ನೀನು ಮನೋರಮೆಯನ್ನು ಬಿಟ್ಟು ಹೋದರೆ ಅವಳು ಪ್ರಾಣವಿಟ್ಟುಕೊಳ್ಳಲಿಕ್ಕಿಲ್ಲ.

ಮನೋಹರ– ಪ್ರಾಣವಿಟ್ಟು ಕೊಳ್ಳದಿದ್ದರೆ ಹೊಳೆಗೆ ಬಿದ್ದು ಸಾಯಲಿ! ಅವಳ ಚಾಕರಿಯವನಾಗಿ ಬಾಳಿಕೊಂಡಿರುವುದಕ್ಕಿಂತ ಈ ಹಾಳು ಬಾಳನ್ನು ಕೊನೆಗೊಳಿಸುವುದೇ ಮೇಲು.

ಅರವಿಂದ— ಅವಳು ನಿನ್ನ ಚಾಕರಿಯವಳಾಗಿರಬಹುದೇ?

ಮನೋಹರ— ಹೆಂಡತಿ ಗಂಡನ ಚಾಕರಿಮಾಡದಿದ್ದರೆ ಮತ್ತಾರು ಮಾಡುವುದು? ನಾವವರನ್ನು ಮದುವೆಮಾಡಿಕೊಳ್ಳುವುದೇತಕ್ಕೆ ಮತ್ತೆ?

ಅರವಿಂದ— ಒಹೋ! ಇಷ್ಟಕ್ಕೆ ಬಂತೋ ಈಗ ನಿನ್ನ ಸ್ತ್ರೀ ಸ್ವಾತಂತ್ರ್ಯದ ಪ್ರತಿಪಾದನೆ? ಹಾಗಾದರೆ ನೀನು ಪೂರ್ವಾಚಾರವಾದಿಗಳಿಗಿಂತಲೂ ಕಳತೆಯಾದೆಯಲ್ಲವೇ?

ಮನೋಹರ— ಕಳತೆಯಾಗಲಿ ಮೇಲಾಗಲಿ, ನಾನು ಗಂಡಸಾಗಿ ಹೆಂಡತಿಯ ಚಾಕರಿಯವನಾಗಿರಲು ನನ್ನಿಂದ ಸಾಧ್ಯವಿಲ್ಲ.

ಅರವಿಂದ— ಯಾಕೆ ಸಾಧ್ಯವಿಲ್ಲ? ಅವಳು ಹೊರಗೆ ಸಂಪಾದನೆಗೆ ಹೋಗುವಾಗ ಗಂಡನೇಕೆ ಮನೆಕೆಲಸ ಮಾಡಿಕೊಂಡಿರ ಬಾರದು?

ಮನೋಹರ– ಮನೆಕೆಲಸಮಾಡುವುದು ಹೆಂಗಸರ ಕೆಲಸ ಗಂಡಸರವಲ್ಲ.

ಅರವಿಂದ— ಹಾಗಾದರೆ ಮನೋರಮೆ ಹೊರಗೆ ಹೋಗಿ ಸಂಪಾದ
ನೆ ಮಾಡಿ ತಂದು ಹಾಕುವುದು ಮಾತ್ರವಲ್ಲದೆ, ಮನೆಕೆಲಸ ಕೂಡ ಮಾಡ
ಬೇಕೆಂದು ನೀನನ್ನುವುದೇ?

ಮನೋಹರ–ಅವಳೇನು ಬೇಕಾದರೂ ಮಾಡ್ಲಿ ಅವಳ ಪ್ರಸ್ತಾಪವ
ನ್ನೇ ನನ್ನೊಡನೆ ನೀನು ಎತ್ತಬಾರದು. ನನಗೂ ಅವಳಿಗೂ ಇನ್ನು ಯಾವ
ಸಂಬಂಧವೂ ಇರಲಾರದು.

ಅರವಿಂದ-ಛೆ! ಛೆ! ಹಾಗೇಕೆ ಹೇಳುವೆ ಮನೋಹರ. ನೀನೇ ಅವಳ
ಮನೋಹರ, ಅವಳೇ ನಿನ್ನ ಮನೋರಮೆ.

[ರಂಗನು ದಿಗಿಲುಗೊಂಡು ಓಡಿಬಂದು]

ರಂಗ—ರಾಯರೇ! ರಾಯರೇ!! ಸ್ವಲ್ಪ ಬನ್ನಿ ದಯಮಾಡಿ ಒಮ್ಮೆ ಮ
ನೆಗೆ ಬನ್ನಿ! ಅಮ್ಮ ಪ್ರಾಣವಿಟ್ಕೊಳ್ಳುವಹಾಗಿಲ್ಲ.'ನಾನು ಅರವಿಂದಣ್ಣನ
ಮಾತು ಕೇಳಿ ಕೆಟ್ಟೆ! ಅವರಿಲ್ಲಿ ಪ್ರಾಣಹತ್ಯೆ ಮಾಡಿಕೊಂಡರೋ ಏನೋ
ನ್ನೇನು ನನ್ನ ಗತಿ ಎಂದು ಎದೆ ಎದೆ ಬಡಕೊಳ್ಳುತ್ತಾರೆ ರಾಯರೆ!

ಅರವಿಂದ–ನೀನು ಏನು ಹೇಳಿದೆಯೋ ಅವಳೊಡನೆ?

ರಂಗ–ನೋಡುವ ಪರೀಕ್ಷೆ ಮಾಡುವ ಎಂದು ನಾನು ಒಂದು ಸುಳ್ಳು
ಹೇಳಿಬಿಟ್ಟೆ ರಾಯರೆ, ಕ್ಷಮಿಸಬೇಕು.

ಅರವಿಂದ- ಏನು ಹೇಳಿದೆ?

ರಂಗ–ಅವರು ಶಾಲೆಯಿಂದ ಬಂದಕೂಡಲೆ, ರಾಯರೆಲ್ಲಿ "ಹೋದ್ರೋ
ರಂಗ' ಎಂದು ಕೇಳಿದ್ರು 'ಅವರು ಮನೆಬಿಟ್ಟು ಹೋಗಿದ್ದಾರೆ ಎಲ್ಲಿಗಾದ
ರೂ ಹೋಗಿ ಪ್ರಾಣ ಕಳಕೊಳ್ಳುತ್ತಾರಂತೆ' ಎಂದೆ ನಾನು. ಕೂಡ್ಲೆ ಶು
ರು ಮಾಡಿದ್ರಪ್ಪ ಬೊಬ್ಬೆ ಹಾಕ್ಲಿಕ್ಕೆ! ನನಗವರನ್ನು ನೋಡಿ ಪಾಪ ತಡ
ಕೊಳ್ಳಲಿಕ್ಕಾಗಲಿಲ್ಲ. 'ಅಮ್ಮ ಸ್ವಲ್ಪ ಸಮಾಧಾನ ಮಾಡಿ ಈಗ ಬರತ್ತೇನೆ.'
ಎಂದು ಓಡಿಬಂದೆ.

ಅರವಿಂದ—ನೋಡಿದೆಯ ಮನೋಹರ ಹೆಣ್ಣು ಹೃದಯ! ನಾವು
ಮ್ಮ ಹೆಂಡಿರನ್ನು ಕಾಣುವಂತೆ ಅವರೆಲ್ಲಿಯಾದರೂ ನಮ್ಮನ್ನು ಕಾಣುವಂ
ತಿದ್ದರೆ ನಮ್ಮಲ್ಲಿ ಶೇಕಡ 99 ಮಂದಿ ತಮ್ಮ ಪ್ರಾಣವನ್ನೇ ಇಟ್ಟುಕೊಳ್ಳು

ವ ಹಾಗಿಲ್ಲ. ಹೆಂಡತಿಯೆಂದರೆ ನಾವು ಸ್ವಾಮಿತ್ವ ಪಡೆದಿರುವಸೊತ್ತು. ಅದ
ನ್ನು ನಮ್ಮ ಉಪಯೋಗಕ್ಕಾಗಿ ಇಚ್ಛಾನುಸಾರ ಉಪಯೋಗಿಸುವುದು ಗ
ಡಂದಿರಾದ ನಮ್ಮ ಜನ್ಮಸಿದ್ಧ ಹಕ್ಕು-ವರೆಲ್ಲಿಯಾದರೂ ಸ್ವತಂತ್ರ ತೊ
ರಿಸಿದರೆ ನಮ್ಮ ಗಂಡಸುತನಕ್ಕದು ಅಸಹನೀಯವಾಗುವುದು ಎಂತಹ ಸ್ತ್ರೀ
ಸ್ವಾತಂತ್ರ್ಯ ಪ್ರತಿಪಾದಕನೂ ಎಷ್ಟೊಂದು ಉದಾರ ಬುದ್ಧಿಯುವನೂ ಕಾ
ರ್ಯಶಃ ತನ್ನ ಹೆಂಡತಿಯು ಸ್ವತಂತ್ರವೃತ್ತಿಯುನ್ನು ತಾಳಿಕೊಳ್ಳಲಾರನು ಅ
ನಾದಿಕಾಲದಿಂದ ಗಂಡಸರ ರಕ್ತದಲ್ಲಿ ಸೇರಿಹೋಗಿದೆ ಹೆಂಗಸರ ಮೇಲಿನ
ಸ್ವಾಮಿತ್ವದ ಭಾವನೆ

**ಮನೋಹರ**—ನೀನು ಹೇಳುವುದೆಲ್ಲಾ ಅಕ್ಷರಶಃ ನಿಜ ಅರವಿಂದ ಬಾ
ಯಲ್ಲಿ ನಾವು ಎಷ್ಟು ಹೇಳಿದರೂ ಕಾರ್ಯದಲ್ಲಿ ನಮಗೆ ಸ್ತ್ರೀಯರ ಸ್ವತ
ವೃತ್ತಿಯು ಸ್ವೈರವರ್ತನೆಯಾಗಿ ತೋರಿ ತೀವ್ರ ಅಸಹನೀಯವಾಗುವ
ದು. ಆಗ ನಮ್ಮ ಗಂಡಸುತನವೇ ಮುಂದಾಗಿ ತಲೆ ಹಾಕುವುದು ನೀನ
ಹೇಳಿದಂತೆ ನಮ್ಮ ರಕ್ತದಲ್ಲಿ ಸೇರಿ ಹೋಗಿದೆ ಆ ಅಹಂಭಾವ.

**ಅರವಿಂದ** -ಹೇಗೂ ನಿನ್ನ ಪರೀಕ್ಷೆಯೊಂದು ನಡೆದಂತಾಯಿತು. ಪ
ಚ್ಚು ಮಾತಾಡುವವರು ಯಾವಾಗಲೂ ಕಡಿಮೆ ಮಾಡುವವರೆಂದಾಯಿ
ತು. ಇನ್ನು ನನ್ನನ್ನು ಹಂಗಿಸುವುದೊಂದು ನಿಂತು ಹೋಯಿತಲ್ಲ ಈ ನಾಟ
ಕದಲ್ಲಿ ಮನೋರಮೆ ತನ್ನ ಭೂಮಿಕೆಯನ್ನು ಬಲು ಚತುರತೆಯಿಂದ ಅಭಿ
ನಯಿಸಿಬಿಟ್ಟಳು. ತಮಾಷೆಗೆ ಮಾಡಿದ್ದು ಪ್ರಾಣಕ್ಕೆ ಬಂತೋ ಎಂದು ಅವ
ಳೀಗ ದಿಗಿಲುಗೊಂಡಿರಬೇಕ ಪಾಪ. ನಡೆ ಬೇಗ ಹೋಗುವ

**ಮನೋಹರ** — ತಡೆ ತಡೆ. ಏನು, ಇದೆಲ್ಲಾ ನೀನು ನಟಸಿದ ನಾಟ
ಕವೇ ಆಹಾ ನನಗೊಂದಿಷ್ಟು ತಿಳಿಯದಾಯಿತಲ್ಲ ನಿಮ್ಮಿಬ್ಬರ ಒಳಸಂಚು!

**ಅರವಿಂದ**—ತಿಳಿದರೆ ಸ್ವಾರಸ್ಯವೇನುಂಟದರಲ್ಲಿ ನಡೆ ಈ ಪ್ರಹಸನ
ಪರ್ಯವಸಾನ ಕೆಟ್ಟದಾದೀತು ಮತ್ತೆ ಮನೋರಮೆ ಎಲ್ಲಿಯಾದರ
ಪ್ರಾಣ ಕಳಕೊಂಡ್ರೆ!

**ರಂಗ**—ಹೌದಪ್ಪಾ ಹೌದು! ಅಮ್ಮ ಬೊಬ್ಬೆ ಹಾಕುವುದು ನೋಡಿ ನ
ನು ಕಂಗಲಾಗಿ ಬಿಟ್ಟೆ. ಎಲ್ಲಿಯಾದರೂ ಎದೆಗಿದೆ ಒಡೆದು ಹೋದೀತು ಅ

ರದು! ಬೇಗ ಹೋಗುವ ರಾಯರೇ! ಒಮ್ಮೆ ಅಮ್ಮನನ್ನು ಸಮಾಧಾನ ಪಡಿಸಿ ಮತ್ತೆ ಎಷ್ಟು ಬೇಕಾದ್ರೂ ಮಾತಾಡುವ ಅಮ್ಮನಿಗೂ ಶನಿವಾರ ಆದಿತ್ಯವಾರ ಎರಡು ದಿವಸ ರಜೆ

**ಮನೋಹರ**—ಛೆ! ಹೆಣ್ಣು ಹೃದಯವು ಅದೆಷ್ಟು ಮೃದುವಾದುದು! ಎಷ್ಟೊಂದು ಕೋಮಲವಾದುದು! ಸ್ತ್ರೀಯರೆಷ್ಟು ತ್ಯಾಗಶೀಲರು! ಎಂತಹ ಸಹನಾಮೂರ್ತಿಗಳು. ನಿಷ್ಠುರ ಒರಟು ಹೃದಯ ನಮ್ಮದು ಉದ್ಧಟ ಸ್ವಾರ್ಥಿಗಳು ನಾವು. ಅಧಿಕಾರ ನಡೆಸುವುದೊಂದೇ ನಮಗೆ ಗೊತ್ತು.

**ಅರವಿಂದ** — ಸಾಕು ಸಾಕು. ಈ ಪಶ್ಚಾತ್ತಾಪವು ಮಾತಿನಲ್ಲೇ ವೆಚ್ಚವಾಗಿ ಬಿಟ್ಟರೆ ಮತ್ತೆ ಕಾರ್ಯಕ್ಕಿಳಿಯಲಾರದು

**ಮನೋಹರ** —ನೋಡು ಕಾರ್ಯಕ್ಕಿಳಿಯುವುದೋ ಇಲ್ಲವೋ ಎಂದು ದಾಂಪತ್ಯವು ಸಾಧಾರಣ ಜವಾಬ್ದಾರಿಯ ವಿಷಯವಲ್ಲ ಅರವಿಂದ. ಅದರಲ್ಲಿ ಎಷ್ಟು ಅನುಭವವಿದ್ದರೂ ಸಾಲದು. ಬರಿಯ ಮಾತು ಕಾರ್ಯಕ್ಕೆಬಾರದು. ಕಾರ್ಯದಲ್ಲಿ ನುರಿತು ನುರಿತು ಪಡೆಯಬೇಕು ಅನುಭವ. ಅದರಲ್ಲೀ ಗಂಡ ಹೆಂಡಿರಿಬ್ಬರೂ ಸಮಭಾಗಿಗಳು, ಸಹವ್ಯವಸಾಯಿಗಳು; ಸಹಕಾರಿಗಳು.

**ಅರವಿಂದ** -ಅಷ್ಟೊಂದು ನಿನಗೆ ತಿಳಿದರೆ ನೀನು ನವಮನೋಹರನಾಗುವಿ. ನವ ಮನೋರಮೆಯನ್ನೀಗ ಕಾಣುವಿ. ಇಲ್ಲಿಗೆ ಸಾರ್ಥಕವಾಗಿ ಕೊನೆಗೊಂಡಾಯಿತು. ನನ್ನೀ ಪ್ರಹಸನ. ಹೋಗುವ ನಡೆ. [ಕೈ ಕೈ ಹಿಡಕೊಂಡು ಇಬ್ಬರೂ ಹೋಗುವರು:]

---

೧೯೩೩

---

Printed at Navayuga Press, Udipi, S. K.

